|| ಶ್ರೀ ||

# ವಾಲ್ಮೀಕಿ ರಾಮಾಯಣದ ಕಥೆ

ಲೇಖಕ:–

ಪಿ. ಕೆ. ನಾರಾಯಣ,

ಮಂಗಳೂರು.

೧೯೫೭

ಪ್ರಕಾಶಕರು:—

ಬಾಲಸಾಹಿತ್ಯ ಮಂಡಲ, ಲಿಮಿಟೆಡ್,

ಮಂಗಳೂರು.

# ಮುನ್ನುಡಿ.

ವಾಲ್ಮೀಕಿ ರಾಮಾಯಣದ ಕಥೆಯೆಂಬ ಈ ಚಿಕ್ಕ ಪುಸ್ತಕವನ್ನು ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಬರೆದುದಾಗಿದೆ. ಶಾಲಾ ಕಾಲೇಜುಗಳಲ್ಲಿ ಕಲಿವ ವಿದ್ಯಾರ್ಥಿಗಳಿಗೆ ನಮ್ಮ ಸಂಸ್ಕೃತಿಯ ಪ್ರತೀಕದಂತಿರುವ ರಾಮಾಯಣ, ಭಾರತ, ಭಾಗವತಗಳ ಕಥೆಯು ಸಾಮಾನ್ಯ ರೂಪರೇಖೆಗಳಾದರೂ ಗೊತ್ತಿರುವುದು ಅತೀ ಅಗತ್ಯವಾಗಿದೆ.

ಇದನ್ನು ವಿದ್ಯಾರ್ಥಿಗಳಿಗೆಂದು ಬರೆದರೂ ನಮ್ಮಲ್ಲೀಗ ನವೀನವಾಗಿ ಅಕ್ಷರಸ್ಥರಾಗಿರುವ ವಯಸ್ಕರೂ, ಕೆಳತರಗತಿಗಳಲ್ಲೇ ಶಾಲೆಬಿಟ್ಟವರೂ ಓದಿಕೊಳ್ಳಲು ಅನುಕೂಲವಾಗಿದೆ.

ಮಂಗಳೂರು ಬಾಲಸಾಹಿತ್ಯ ಮಂಡಲದವರು ಈ ಪುಸ್ತಕದ ಪ್ರಕಾಶನದ ಹೊಣೆಹೊತ್ತು ಪ್ರಕಟಿಸಿದುದಕ್ಕಾಗಿ ಅವರನ್ನು ಅಭಿನಂದಿಸುತ್ತೇನೆ.

ವಿದ್ಯಾದಶಮಿ,
೧೪—೧೦—೧೯೫೬

**ಪಿ. ಕೆ. ನಾರಾಯಣ,**
ಮಂಗಳೂರು.

# ಅನುಕ್ರಮಣಿಕೆ.

— ಶ್ರೀ —

# ರಾಮಾಯಣ.

## ೧. ಬಾಲಕಾಂಡ.

ಭರತಖಂಡದ ಉತ್ತರದಲ್ಲಿ ಕೋಸಲವೆಂಬ ದೇಶವಿದೆ. ಪೂರ್ವಕಾಲದಲ್ಲಿ ಅದನ್ನು ಸೂರ್ಯವಂಶದ ಅರಸರು ಆಳುತಿದ್ದರು. ಸರಯೂ ನದಿಯ ತೀರದ ಅಯೋಧ್ಯೆಯು ಅದರ ರಾಜಧಾನಿ. ಹನ್ನೆರಡು ಯೋಜನ ಉದ್ದವಾಗಿ ಮೂರು ಯೋಜನ ಅಗಲವಾಗಿ ಇರುವ ಆ ರಾಜಧಾನಿಯನ್ನು ಮನುಚಕ್ರವರ್ತಿ ನಿರ್ಮಿಸಿದನು. ಅದರಲ್ಲಿ ವಿಸ್ತಾರವಾದ ಬೀದಿಗಳೂ ವಿಶಾಲವಾದ ಉಪವನಗಳೂ ಕಂಗೊಳಿಸುತಿದ್ದುವು. ಧರ್ಮವಂತನಾದ ದಶರಥನೆಂಬ ರಾಜನು ಆ ನಗರದಲ್ಲಿದ್ದು ರಾಜ್ಯಭಾರ ಮಾಡುತಿದ್ದನು. ಅವನಿಗೆ ಸುಮಂತ್ರರೇ ಮುಂತಾದ ನಿಪುಣರಾದ ಮಂತ್ರಿಗಳಿದ್ದರು. ವಸಿಷ್ಠ ಮಹರ್ಷಿಯು ಅವನ ಕುಲಪುರೋಹಿತನಾಗಿದ್ದನು. ಈ ಮಂತ್ರಿಪುರೋಹಿತರ ಹಿತಸೂಚನೆಗಳಂತೆ ರಾಜನು ನ್ಯಾಯದಿಂದ ರಾಜ್ಯವಾಳುತಿದ್ದನು. ಪ್ರಜೆಗಳು ಧರ್ಮನಿರತರಾಗಿ ಸುಖಶಾಂತಿಯಲ್ಲಿದ್ದರು.

ವಿಖ್ಯಾತನಾದ ದಶರಥ ಮಹಾರಾಜನಿಗೆ ಕೌಸಲ್ಯೆ, ಕೈಕೆ, ಸುಮಿತ್ರೆಯರೆಂಬ ಮೂವರು ರಾಣಿಯರಿದ್ದರು. ಅವರೊಂದಿಗೆ ರಾಜನು ಸಂಸಾರ ಸುಖವನ್ನು ಅನುಭವಿಸುತಿದ್ದನು. ಬಹಳ ಕಾಲದ ವರೆಗೆ ಅವರಿಗೆ ಮಕ್ಕಳಾಗಲಿಲ್ಲ. ಯೌವನ ಕಳೆದಂತೆ ರಾಜನಿಗೆ ಈ ಚಿಂತೆ ಹೆಚ್ಚಾಯಿತು. ಅದಕ್ಕಾಗಿ ಅವನು ಅಶ್ವಮೇಧಯಾಗವನ್ನು ಮಾಡಿದನು. ಆ ಯಾಗವು ವಿಜ್ರಂಭಣೆಯಿಂದ ನಡೆಯಿತು. ಅನಂತರ ದಶರಥನು ಮುನಿಗಳ ಸಲಹೆಯಂತೆ ಪುತ್ರಕಾಮೇಷ್ಟಿಯೆಂಬ ಯಾಗವನ್ನು ಮಾಡಿದನು. ಆ ಯಾಗವು ಸಮಾಪ್ತಿಗೊಳ್ಳುವ ದಿನ ಯಜ್ಞಕುಂಡದಲ್ಲಿ ಅಗ್ನಿದೇವನು ಕಾಣಿಸಿಕೊಂಡು, ದೇವತೆಗಳು ತಯಾರಿಸಿದ ಪಾಯಸವನ್ನು ರಾಜನಿಗೆ ಕೊಟ್ಟು, ಅವನ ಇಷ್ಟಾರ್ಥವು ಕೈಗೂಡುವುದೆಂದು ಹೇಳಿ ಮಾಯವಾದನು. ದಶರಥನು ಅದನ್ನು ಭಕ್ತಿಯಿಂದ ಸ್ವೀಕರಿಸಿ ತನ್ನ ರಾಣಿಯರಿಗೆ ಪ್ರೀತಿಯಿಂದ ಹಂಚಿ ಕೊಟ್ಟನು. ಕೆಲದಿನಗಳಲ್ಲೇ ರಾಣಿಯರು ಗರ್ಭಿಣಿಯರಾದರು. ಹಾಗೆ

ಒಂದು ವರ್ಷವಾಗುವಾಗ ಕೌಸಲ್ಯೆಯು ಚೈತ್ರಶುಕ್ಲ ನವಮಿಯ ಶುಭದಿನ ದಲ್ಲಿ ಗಂಡುಮಗುವನ್ನು ಹೆತ್ತಳು. ಆ ಮಗುವಿಗೆ ರಾಮನೆಂದು ನಾಮಕರಣ ಮಾಡಿದರು. ಅನಂತರ ಕೈಕೆಯು ಹೆತ್ತ ಮಗುವಿಗೆ ಭರತನೆಂದು ಹೆಸರಿಟ್ಟರು. ಸುಮಿತ್ರೆಯ ಇಬ್ಬರು ಮಕ್ಕಳಿಗೆ ಲಕ್ಷ್ಮಣ ಶತ್ರುಘ್ನರೆಂಬ ಹೆಸರಾಯಿತು.

ಹುಟ್ಟಿದ ಮಕ್ಕಳು ಬೆಳೆದು ಬಾಲಕರಾದರು. ಅವರ ಮಕ್ಕಳಾಟವನ್ನು ಕಂಡು ತಂದೆತಾಯಿಗಳ ಕಣ್ಣು ಮನಸ್ಸುಗಳು ಆನಂದದಿಂದ ಅರಳಿದವು. ಅರಸನು ಮಕ್ಕಳಿಗೆ ವಿದ್ಯಾಬುದ್ಧಿಗಳನ್ನು ಕಲಿಸಿದನು. ಬಾಲಕರೂ ಪ್ರೀತಿವಿಶ್ವಾಸಗಳಿಂದ ನಡೆದುಕೊಳ್ಳುತಿದ್ದರು. ಅವರಲ್ಲಿ ರಾಮ ಲಕ್ಷ್ಮಣರಿಗೆ ಬಹಳ ಹೊಂದಿಕೆ. ಅದರಂತೆ ಭರತ ಶತ್ರುಘ್ನರೂ ಒಂದಾಗಿದ್ದರು. ತನ್ನ ಕುಮಾರರು ವಿದ್ಯಾಬುದ್ಧಿಗಳಲ್ಲಿ ಪ್ರವೀಣರಾಗಿ ಬೆಳೆದು ಯೌವನಕ್ಕೆ ಕಾಲಿಡುವುದನ್ನು ಕಂಡು ಅರಸನಿಗೆ ಮತ್ತಷ್ಟು ಆನಂದವಾಯಿತು. ಆ ಆನಂದದಲ್ಲಿ ಈ ಕುಮಾರರಿಗೆ ತಕ್ಕ ಸಮಯದಲ್ಲೇ ಮದುವೆಮಾಡಿಸಬೇಕೆಂದು ಯೋಚಿಸಿದನು.

ಒಂದು ದಿನ ದಶರಥನು ತನ್ನ ಮಂತ್ರಿಪುರೋಹಿತರೊಂದಿಗೆ ಇದೇ ವಿಚಾರವಾಗಿ ಮಾತನಾಡುತಿದ್ದನು. ಆಗ ಅಲ್ಲಿಗೆ ವಿಶ್ವಾಮಿತ್ರನೆಂಬ ಋಷಿಯು ಬಂದನು. ಅರಸನು ಅವನನ್ನು ಇದಿರುಗೊಂಡು ಸ್ವಾಗತಿಸಿ, ಗೌರವದಿಂದ ಸತ್ಕರಿಸಿದನು. ಋಷಿಗಳ ಕ್ಷೇಮವಾರ್ತೆಯನ್ನು ವಿಚಾರಿಸಿದನು.

"ಮಹಾರಾಜ! ನಾನೊಂದು ಮಹಾಯಜ್ಞವನ್ನು ಪ್ರಾರಂಭಿಸಿದ್ದೇನೆ. ಸುಭಾಹು ಮಾರೀಚರೆಂಬ ದುಷ್ಟರಾಕ್ಷಸರು ಈ ಯಜ್ಞಕ್ಕೆ ವಿಘ್ನಕಾರಿಗಳಾಗಿದ್ದಾರೆ. ಅವರನ್ನು ಕೊಲ್ಲಲು ಶ್ರೀರಾಮನು ಮಾತ್ರ ಸಮರ್ಥನು. ಆದಕ್ಕಾಗಿ ನಾನಿಲ್ಲಿಗೆ ಬಂದಿರುವೆನು. ಆದ್ದರಿಂದ ಅವನನ್ನು ನನ್ನೊಡನೆ ಕಳುಹಿಸು. ಇದರಿಂದ ನಿನಗೆ ಕೀರ್ತಿಯುಂಟಾಗುವುದು" ಎಂದು ವಿಶ್ವಾಮಿತ್ರನು ತಾನು ಬಂದ ಉದ್ದೇಶವನ್ನು ತಿಳಿಸಿದನು. ಇದನ್ನು ಕೇಳಿ ದಶರಥನಿಗೆ ಮಹಾದುಃಖವಾಯಿತು. ಹಸುಳೆಗಳಾದ ಅವರು ದುಷ್ಟರೊಡನೆ ಹೋರಾಡುವುದೆ? ಅದಾಗದು; ತಾನೇ ಬರುವೆನೆಂದನು. ರಾಜನ

ಮಾತಿನಿಂದ ಕೋಪಗೊಂಡ ಮುನಿಯು ಹೊರಡಲು ಎದ್ದುನಿಂತನು. ಆಗ ವಸಿಷ್ಠರು ದಶರಥನಿಗೆ ಸಮಾಧಾನ ಹೇಳಿ ವಿಶ್ವಾಮಿತ್ರನೊಂದಿಗೆ ರಾಮನನ್ನು ಕಳುಹಿಸೆಂದರು. ಸಕಲ ಶಸ್ತ್ರಾಸ್ತ್ರಗಳ ಪ್ರಯೋಗದಲ್ಲಿಯೂ ಕುಶಲನಾದ ವಿಶ್ವಾಮಿತ್ರನೊಂದಿಗೆ ಕಳುಹಿಸುವುದರಿಂದ ರಾಮನಿಗೂ ಶ್ರೇಯಸ್ಸುಂಟಾಗುವುದೆಂದರು.

ಕುಲಪುರೋಹಿತರ ಮಾತುಗಳಿಂದ ಸಮಾಧಾನಗೊಂಡ ದಶರಥನು ರಾಮನನ್ನು ವಿಶ್ವಾಮಿತ್ರನೊಂದಿಗೆ ಕಳುಹಿಸಲು ಒಪ್ಪಿದನು. ರಾಮನು ಹೊರಟಾಗ ಅವನ ನೆರಳಿನಂತಿರುವ ಲಕ್ಷ್ಮಣನೂ ಹೊರಟನು. ಆ ಮೂವರೂ ಪ್ರಯಾಣ ಬೆಳೆಸಿ ಸರಯೂ ನದೀತೀರಕ್ಕೆ ಬಂದರು. ಬಾಲಕರು ನದಿಯಲ್ಲಿ ಚೆಲ್ಲಾಟವಾಡಿ ಸ್ನಾನಮಾಡಿದರು. ವಿಶ್ವಾಮಿತ್ರನು ರಾಮನಿಗೆ ಕೆಲವು ಮಂತ್ರಾಸ್ತ್ರಗಳ ಪ್ರಯೋಗವನ್ನು ಅಲ್ಲಿ ಕಲಿಸಿದನು. ಆ ರಾತ್ರಿ ಅವರು ಅಲ್ಲಿಯೇ ಇದ್ದು ದಣುವಾರಿಸಿಕೊಂಡರು.

ಮರುದಿನ ಅವರು ಮುಂದೆ ನಡೆದರು. ಹೀಗೆ ಹೋಗುತ್ತಿರುವಾಗ ರಾಜಕುಮಾರರಿಗೆ ಆಯಾಸವಾಗದಂತೆ ಮುನಿಯು ಸುಂದರದೃಶ್ಯಗಳನ್ನು ತೋರಿಸುತಿದ್ದನು. ಅವುಗಳ ಕಥೆಗಳನ್ನು ಹೇಳುತಿದ್ದನು. ಕೊನೆಗೆ ಅವರು ಒಂದು ದಟ್ಟವಾದ ಕಾಡಿಗೆ ಬಂದರು. ಅದು ತಾಟಕಿಯೆಂಬ ದುಷ್ಟ ರಾಕ್ಷಸಿಗೆ ಸೇರಿದ ವನ. ಆಕೆ ಸಾಮಾನ್ಯಳಲ್ಲ. ಸಾವಿರ ಆನೆಗಳ ಬಲವುಳ್ಳವಳು. ಆವಳ ಮಗನೇ ಮಾರೀಚನು. ತಪಸ್ಸು ಮಾಡುವವರಿಗೆ ತೊಂದರೆಕೊಡುವ ಆವಳನ್ನು ಕೊಲ್ಲಬೇಕೆಂದು ವಿಶ್ವಾಮಿತ್ರನು ತಿಳಿಸಿದನು.

ಅವರು ಹೀಗೆ ಮಾತನಾಡುತ್ತಿರುವಾಗಲೇ ತಾಟಕಿಯು ಘರ್ಜನೆ ಮಾಡುತ್ತ ಅತ್ತಬಂದಳು. ರಾಮನು ಬಾಣಗಳಿಂದ ಅವಳ ಕೈಗಳನ್ನು ಕತ್ತರಿಸಿದನು. ಆಕೆ ಮಾಯಾವಾಗಿ ಇವರ ಮೇಲೆ ಕಲ್ಲಿನ ಮಳೆಯನ್ನು ಸುರಿಸಿದಳು. ಆಗ ರಾಮನು ದಿವ್ಯವಾದ ಒಂದು ಬಾಣವನ್ನು ಪ್ರಯೋಗಿಸಿ ಮಾಯೆಯನ್ನು ಹರಿಸಿದನು; ಮತ್ತೊಂದು ಬಾಣದಿಂದ ತಾಟಕಿಯನ್ನು ಸಂಹರಿಸಿದನು. ಇದರಿಂದ ವಿಶ್ವಾಮಿತ್ರನಿಗೆ ಸಂತೋಷವಾಯಿತು.

ತಾಟಕಿಯ ವಧೆಯಿಂದ ಸಂತುಷ್ಟನಾದ ವಿಶ್ವಾಮಿತ್ರನು ಮರುದಿನ

ರಾಮನನ್ನು ಹೊಗಳಿ, ಅವನಿಗೆ ಹಲವು ಮಂತ್ರಾಸ್ತ್ರಗಳನ್ನು ಕಲಿಸಿದನು. ತಾನರಿತ ವಿದ್ಯೆಯನ್ನು ರಾಮನು ಲಕ್ಷ್ಮಣನಿಗೂ ಹೇಳಿಕೊಟ್ಟನು. ಹೀಗೆ ಅವರು ಪ್ರಯಾಣಮಾಡಿ ವಿಶ್ವಾಮಿತ್ರನ ಆಶ್ರಮವನ್ನು ಸೇರಿದರು.

ವಿಶ್ವಾಮಿತ್ರನ ಆಶ್ರಮವಿದ್ದ ವನದಲ್ಲಿ ಹಿಂದೆ ಮಹಾವಿಷ್ಣುವು ವಾಮನಾವತಾರಕಾಲದಲ್ಲಿ ತಪಸ್ಸು ಮಾಡಿದ್ದನು. ಆಶ್ರಮವನ್ನು ಸೇರಿದ ಮೇಲೆ ವಿಶ್ವಾಮಿತ್ರನು ಯಜ್ಞವನ್ನು ಪ್ರಾರಂಭಿಸಿದನು. ರಾಮಲಕ್ಷ್ಮಣರು ಬಿಲ್ಲು ಬಾಣಗಳನ್ನು ಹಿಡಿದು ಯಜ್ಞರಕ್ಷಣೆಗೆ ಸಿದ್ಧರಾದರು. ಯಜ್ಞವು ಯಾವ ತೊಂದರೆಯೂ ಇಲ್ಲದೆ ಸಾಗಿತು. ಆದರೆ ಯಜ್ಞವು ಕೊನೆಗೊಳ್ಳುವ ದಿನ ಆಕಾಶದಿಂದ ಭಯಂಕರವಾದ ಶಬ್ದವೊಂದು ಕೇಳಿಸಿತು. ಕೂಡಲೆ ಆಶ್ರಮದ ಮೇಲೆ ರಕ್ತದ ಮಳೆಸುರಿಯಿತು. ಮಾರೀಚ ಸುಬಾಹುಗಳು ತಮ್ಮ ಅನುಚರರೊಂದಿಗೆ ನಡೆಸುತ್ತಿರುವ ಅತ್ಯಾಚಾರವನ್ನು ಕಂಡು ರಾಮನು ಅವರ ಮೇಲೆ ಬಾಣಪ್ರಯೋಗಮಾಡಿದನು. ರಾಮನ ಬಾಣಕ್ಕೆ ಸಿಕ್ಕಿದ ಮಾರೀಚನು ಬಿರುಗಾಳಿಗೆ ಸಿಕ್ಕಿದ ತರಗೆಲೆಯಂತಾಗಿ ದೂರದ ಸಾಗರದಲ್ಲಿ ಬಿದ್ದನು. ಸುಭಾಹು ಸತ್ತುಹೋದನು. ಉಳಿದ ರಾಕ್ಷಸರೂ ಕಾಣದಾದರು. ಅನಂತರ ಯಜ್ಞವು ಸಾಂಗವಾಗಿ ನೆರವೇರಿತು. ಇದರಿಂದ ಎಲ್ಲರಿಗೂ ಸಂತೋಷವಾಯಿತು. ಅವರೆಲ್ಲರೂ ರಾಮನನ್ನು ಹೊಗಳಿ ಗೌರವಿಸಿದರು.

ವಿಶ್ವಾಮಿತ್ರನ ಯಾಗಕ್ಕೆ ಬಂದಿದ್ದ ಋಷಿಗಳೆಲ್ಲ ಮರುದಿನ ಮಿಥಿಲಾಪಟ್ಟಣಕ್ಕೆ ಹೊರಟರು. ಅಲ್ಲಿ ಜನಕರಾಜನು ದೊಡ್ಡ ಯಾಗವೊಂದನ್ನು ಕೈಕೊಂಡಿದ್ದನು. ಆಗ ವಿಶ್ವಾಮಿತ್ರನೂ ರಾಮಲಕ್ಷ್ಮಣರನ್ನು ಕರೆದುಕೊಂಡು ಅವರೊಂದಿಗೆ ಹೊರಟನು. ಪ್ರಯಾಣಮಾಡುತಿದ್ದಾಗ ವಿಶ್ವಾಮಿತ್ರನು ರಾಮಲಕ್ಷ್ಮಣರಿಗೆ ಹಲವು ಕಥೆಗಳನ್ನು ಹೇಳಿದನು. ಕುಶಕುಶನಾಭರ ಕಥೆ, ಬ್ರಹ್ಮದತ್ತನ ಕಥೆ, ಗಂಗೆಗೌರಿಯರ ಜನ್ಮವೃತ್ತಾಂತ, ಸಗರನ ಕಥೆ— ಮುಂತಾದ ಹಲವು ಕಥೆಗಳನ್ನು ಹೇಳಿದನು. ಹೀಗೆ ಅವರು ಮುಂದೆ ಹೋಗುತ್ತಿರುವಾಗ ಅವರಿಗೆ ಗೌತಮಋಷಿಯ ಆಶ್ರಮವು ಸಿಕ್ಕಿತು. ವಿಶ್ವಾಮಿತ್ರನು ಗೌತಮಪತ್ನಿಯಾದ ಅಹಲ್ಯೆಯ ವೃತ್ತಾಂತವನ್ನು

ಶೀಸಿದನು. ಒಂದು ದಿನ ಗೌತಮುನಿಲ್ಲದ ವೇಳೆಯಲ್ಲಿ ದೇವೇಂದ್ರನು ಬಂದು ಅಹಲ್ಯೆಯೊಂದಿಗೆ ಸರಸವಾಡಿ ತನ್ನ ಆಶೆಯನ್ನು ಪೂರೈಸಿಕೊಂಡನು. ಆಗ ತಾನೇ ಆಶ್ರಮಕ್ಕೆ ಬಂದ ಗೌತಮನು ಇದನ್ನು ತಿಳಿದು ಅವರಿಬ್ಬರಿಗೂ ಶಾಪವಿತ್ತು ತಪಸ್ಸಿಗಾಗಿ ಕೈಲಾಸ ಪರ್ವತಕ್ಕೆ ಹೋದನು. ಆತನ ಶಾಪದಿಂದ ಕಂದಿದ ಅಹಲ್ಯೆಯು ತನ್ನ ಶಾಪವಿಮೋಚನೆಯ ದಿನವನ್ನು ಕಾಯುತಿದ್ದಳು. ಶ್ರೀರಾಮದರ್ಶನದಿಂದ ಅವಳ ಶಾಪವಿಮೋಚನೆಯಾಗುವುದೆಂದು ಗೌತಮನು ಹೇಳಿದ್ದನು. ಇದನ್ನು ತಿಳಿದ ಶ್ರೀರಾಮನು ಆಶ್ರಮ ಪ್ರವೇಶಮಾಡಿದನು. ಶ್ರೀರಾಮದರ್ಶನದಿಂದ ಅಹಲ್ಯೆಯ ಶಾಪವಿಮೋಚನೆಯಾಯಿತು. ಆಕೆ ತೇಜಸ್ವಿಯಾಗಿ ಕಂಡಳು. ರಾಜಕುಮಾರರು ತಪಸ್ಸಿನಿಂದ ಹೊಳೆಯುತಿದ್ದ ಆಕೆಯನ್ನು ವಂದಿಸಿದರು. ಆಕೆಯೂ ಅವರನ್ನು ಆದರಿಸಿ ಉಪಚರಿಸಿದಳು. ಅಹಲ್ಯೆಯ ಶಾಪವಿಮೋಚನೆಯಾಯಿತೆಂದು ಗೌತಮನೂ ಅಲ್ಲಿಗೆ ಬಂದನು. ಪತ್ನಿಯನ್ನು ಸ್ವೀಕರಿಸಿದನು. ರಾಮಾದಿಗಳನ್ನು ಗೌರವಿಸಿ ಎಲ್ಲರನ್ನೂ ತಕ್ಕ ಸತ್ಕಾರದಿಂದ ಸಂತೋಷಪಡಿಸಿದನು.

ಗೌತಮಋಷಿಯ ಆಶ್ರಮದಿಂದ ಹೊರಟ ಅವರು ಮುಂದೆ ಜನಕರಾಜನ ಯಜ್ಞಶಾಲೆಯನ್ನು ಸೇರಿದರು. ಅಲ್ಲಿ ಜನಕಮಹಾರಾಜನಿಗೆ ವಿಶ್ವಾಮಿತ್ರನು ರಾಮಲಕ್ಷ್ಮಣರ ಪರಿಚಯ ಮಾಡಿಕೊಟ್ಟನು. ಇದನ್ನು ಕೇಳಿ ಜನಕನಿಗೆ ಅತ್ಯಾನಂದವಾಯಿತು. ಗೌತಮಋಷಿಯ ಪುತ್ರನಾದ ಶತಾನಂದನು ಅಲ್ಲಿದ್ದನು. ಅವನು ತನ್ನ ತಾಯಿಯ ಶಾಪವಿಮೋಚನೆಯಾದುದನ್ನು ತಿಳಿದು ಸಂತೋಷಪಟ್ಟನು. ಅವನು ರಾಮಲಕ್ಷ್ಮಣರಿಗೆ ವಿಶ್ವಾಮಿತ್ರನ ಕಥೆಯನ್ನು ತಿಳಿಸಿದನು.

ವಿಶ್ವಾಮಿತ್ರನ ಅಪೇಕ್ಷೆಯಂತೆ ಜನಕನು ಶ್ರೀರಾಮನಿಗೆ ಅವನಲ್ಲಿದ್ದ ಶಿವಧನುಸ್ಸನ್ನು ತೋರಿಸಿದನು. ಅದರೊಡನೆ ತನ್ನ ಮನಸ್ಸಿನ ಸಂಕಲ್ಪವನ್ನೂ ತಿಳಿಸಿದನು.

"ಇದು ಶಿವನ ಧನುಸ್ಸು. ದಕ್ಷಯಜ್ಞವನ್ನು ಧ್ವಂಸಮಾಡಲು ಆ ದೇವನು ಈ ಧನುಸ್ಸನ್ನು ಉಪಯೋಗಿಸಿದನು. ಅನಂತರ ಅವನು ದೇವತೆಗಳ ಪ್ರಾರ್ಥನೆಗೆ ಮೆಚ್ಚಿ ಅದನ್ನು ಅವರಿಗೆ ಕೊಟ್ಟನು. ನಮ್ಮ

ವಂಶವವನಾದ ದೇವರಾತನು ಮಾಡಿದ ಯಜ್ಞದಿಂದ ಸಂತುಷ್ಟರಾದ ದೇವತೆಗಳು ಆ ಧನುಸ್ಸನ್ನು ಅವನಿಗೆ ಕೊಟ್ಟರು. ಅಂದಿನಿಂದ ಇದು ನಮ್ಮ ವಂಶದ ಸೊತ್ತಾಗಿ ಬಂದಿದೆ. ಒಮ್ಮೆ ನಾನು ಯಜ್ಞಕ್ಕಾಗಿ ನೆಲ ವನ್ನು ಹದಗೊಳಿಸುವಾಗ ಒಂದು ಲೋಹದ ಪೆಟ್ಟಿಗೆ ದೊರೆಯಿತು. ಅದ ರೊಳಗೆ ಸುಂದರವಾದ ಒಂದು ಹೆಣ್ಣುಮಗುವಿತ್ತು. ಆ ಮಗುವಿಗೆ ಸೀತೆ ಯೆಂದು ಹೆಸರಿಟ್ಟು ಸಾಕಿದೆನು. ಈ ಧನುಸ್ಸನ್ನು ಬಗ್ಗಿಸಬಲ್ಲವರಿಗೆ ಅವ ಳನ್ನು ಮದುವೆಮಾಡಿಕೊಡುವುದಾಗಿ ಸಂಕಲ್ಪಮಾಡಿದ್ದೇನೆ. ಹಲವು ಮಂದಿ ರಾಜಕುಮಾರರು ಇದನ್ನು ಬಗ್ಗಿಸಲು ಬಂದರು. ಆದರೆ ಅವರಿಂದ ಆಗಲಿಲ್ಲ."

ಈ ಮಾತುಗಳನ್ನು ಕೇಳಿ, ರಾಮನು ಧನುಸ್ಸನ್ನು ಎತ್ತಿಬಗ್ಗಿಸಲು ಮುಂದಾದನು. ಅವನು ಅದನ್ನೆತ್ತಿ ಅದರ ಹಗ್ಗವನ್ನು ಬಿಗಿಯುವಾಗಲೇ ಅದು ಮುರಿದುಹೋಯಿತು. ಇದರಿಂದ ಜನಕನಿಗೆ ಸಂತೋಷವಾಯಿತು. ಅಲ್ಲಿದ್ದವರಿಗೆಲ್ಲ ಆಶ್ಚರ್ಯವಾಯಿತು. ಕೂಡಲೆ ಜನಕನು ತನ್ನ ಮಂತ್ರಿ ಗಳನ್ನು ಅಯೋಧ್ಯೆಗೆ ಕಳುಹಿಸಿದನು. ಜನಕನ ಒಸಗೆಯನ್ನು ದಶರಥನು ತನ್ನ ಮಂತ್ರಿಪುರೋಹಿತರಿಗೆ ತಿಳಿಸಿದನು. ಅವರು ಸೀತಾರಾಮರ ವಿವಾ ಹಕ್ಕೆ ಸಮ್ಮತಿಯಿತ್ತರು. ಅದರಂತೆ ದಶರಥನು ಪರಿವಾರದೊಂದಿಗೆ ಮಿಥಿ ಲೆಗೆ ಬಂದನು. ಜನಕರಾಜನು ಅವನನ್ನು ಆದರದಿಂದ ಇದಿರುಗೊಂಡು ಉಪಚಾರ ಮಾಡಿದನು.

ಆ ಮೇಲೆ ಅವರು ಮದುವೆಯ ವಿಚಾರ ಮಾತನಾಡಿದರು. ಸೀತಾ ರಾಮರ ಮದುವೆಯೊಂದಿಗೇ ಭರತ ಲಕ್ಷ್ಮಣ ಶತ್ರುಘ್ನರಿಗೂ ಮದುವೆ ಯಾಗಬೇಕೆಂದು ಆಲೋಚಿಸಿದರು. ಅದರಂತೆ ಜನಕನ ಮಗಳಾದ ಊರ್ಮಿಳೆಯನ್ನು ಲಕ್ಷ್ಮಣನಿಗೂ ಜನಕನ ಸೋದರನಾದ ಕುಶಧ್ವಜನ ಪುತ್ರಿಯರಾದ ಮಾಂಡವಿಯನ್ನು ಭರತನಿಗೂ ಶ್ರುತಕೀರ್ತಿಯನ್ನು ಶತ್ರುಘ್ನ ನಿಗೂ ಕೊಟ್ಟು ಮದುವೆ ಮಾಡುವುದಾಗಿ ನಿರ್ಣಯಿಸಿದರು. ವಿವಾಹವು ಬಹಳ ವೈಭವದಿಂದ ಜರಗಿತು. ನೂತನ ದಂಪತಿಗಳನ್ನು ಹಿರಿಯರೆಲ್ಲರೂ ಆಶೀರ್ವದಿಸಿದರು.

ಕೆಲದಿನಗಳಲ್ಲಿ ದಶರಥನು ವಧೂವರರ ದಿಬ್ಬಣದೊಡನೆ ಅಯೋಧ್ಯೆಗೆ ಹೊರಟನು. ದಾರಿಯಲ್ಲಿ ಪರಶುರಾಮನು ಇವರನ್ನು ಎದುರಿಸಿದನು. ದರ್ಪದಿಂದ ಬಂದ ಅವನು ರಾಮನಿಂದ ಸೋತುಹೋದನು. ಆಗ ಪರಶು ರಾಮನು ತನ್ನ ಶಕ್ತಿಸಾಮರ್ಥ್ಯಗಳೆಲ್ಲ ರಾಮನಿಗೂ ಒದಗಲಿ ಎಂದು ಹರಸಿ ದನು. ಇದರಿಂದ ಎಲ್ಲರಿಗೂ ಸಂತೋಷವಾಯಿತು. ಬಂದ ಗಂಡಾಂತರವು ಸುಲಭವಾಗಿ ಪರಿಹಾರವಾಯಿತೆಂದು ದಶರಥನು ಸಂತೋಷಗೊಂಡನು.

ದಿಬ್ಬಣವು ಅಯೋಧ್ಯೆಗೆ ಬಂದಾಗ ಪುರಜನರು ಅದನ್ನು ಸಂಭ್ರಮ ದಿಂದ ಇದಿರುಗೊಂಡರು.

## ೨. ಅಯೋಧ್ಯಾಕಾಂಡ.

ಸತಿಯರನ್ನು ಕೂಡಿಕೊಂಡು ಸುತರು ಬಂದು ಅರಮನೆಯಲ್ಲಿ ಮಂಗಲೋತ್ಸವವಾದ ಮೇಲೆ ದಶರಥನು ಸುಖಸಂತೋಷದಲ್ಲೇ ದಿನ ಕಳೆ ಯುತ್ತಿದ್ದನು. ಹೀಗಿರಲು ಒಂದು ದಿನ ಅವನು, ತನಗಿನ್ನು ಪ್ರಾಯವಾ ಯಿತು; ಪ್ರಾಯಸ್ಥನಾದ ಶ್ರೀರಾಮನಿಗೆ ಪಟ್ಟಕಟ್ಟುವುದು ಒಳಿತೆಂದು ಯೋಚಿಸಿದನು. ಅದನ್ನು ತನ್ನ ಪುರೋಹಿತರೊಡನೆಯೂ ಮಂತ್ರಿಗಳೊಡ ನೆಯೂ ಪ್ರಜೆಗಳೊಡನೆಯೂ ಪ್ರಸ್ತಾಪಿಸಿದನು. ಅವರೂ ಅದನ್ನೊಪ್ಪಿದರು. ಶ್ರೀರಾಮನ ಪಟ್ಟಾಭಿಷೇಕದ ನಿರ್ಧಾರವಾಯಿತು.

ದಶರಥನು ಶ್ರೀರಾಮನನ್ನು ಕರೆದು, ಅವನೊಡನೆ ಈ ನಿರ್ಧಾರ ವನ್ನು ಹೇಳಿದನು. ಶ್ರೀರಾಮನು ತಂದೆಯ ಮಾತಿಗೆ ಏನನ್ನೂ ಹೇಳ ಲಿಲ್ಲ. ವಿಧೇಯನಾಗಿ ಮೌನದಿಂದ ಅದನ್ನೊಪ್ಪಿಕೊಂಡನು. ತಂದೆಗೆ ವಂ ದಿಸಿ ಆಶೀರ್ವಾದ ಪಡೆದು ತನ್ನ ಅರಮನೆಗೆ ನಡೆದನು. ತನ್ನ ಮಗನಿಗೆ ಪಟ್ಟಾಭಿಷೇಕವಾಗುವುದೆಂದು ತಿಳಿದು ಕೌಸಲ್ಯಾದೇವಿಗೆ ಬಹಳ ಸಂತೋಷ ವಾಯಿತು. ಅವಳು ಸಂತೋಷದಿಂದ ದೇವರ ಪ್ರಾರ್ಥನೆಮಾಡಿ ರಾಮ ನಿಗೆ ಶುಭವನ್ನು ಕೋರಿದಳು. ಅಷ್ಟು ಹೊತ್ತಿಗೆ ರಾಮನೇ ಅಲ್ಲಿಗೆ ಬಂ ದನು. ತಾಯಿಗೆ ವಂದಿಸಿದನು. "ಅಮ್ಮಾ! ನನಗೆ ನಾಳೆ ಪಟ್ಟಾಭಿಷೇಕ

ವೆಂದು ಹಿರಿಯರು ನಿಶ್ಚಯಿಸಿದ್ದಾರೆ" ಎಂದನು. ಕೌಸಲ್ಯೆ ಸಂತೋಷದಿಂದ ಉಬ್ಬಿ ಅವನನ್ನು ತಬ್ಬಿಕೊಂಡು ಮುಂಡಾಡಿ ಹರಸಿದಳು.

ಅಲ್ಲಿಯೇ ಇದ್ದ ಸೀತೆಯನ್ನು ರಾಮನು ನಗುವ ಮುಖದಿಂದ ನೋಡಿದನು. ಅವಳ ಮುಖವೂ ಅರಳಿತು. ತನ್ನ ಪತಿಗೆ ಪಟ್ಟಾಭಿಷೇಕವಾಗುವುದೆಂದು ಕೇಳಿದಾಗ ಯಾರಿಗೆ ತಾನೆ ಸಂತೋಷವಾಗದು? ಬಳಿಯಲ್ಲೇ ಇದ್ದ ಲಕ್ಷ್ಮಣನಿಗೂ ಇದು ಆನಂದದ ವಾರ್ತೆಯಾಯಿತು. ಅನಂತರ ರಾಮನು ಇದನ್ನೆಲ್ಲ ನೋಡಿ ತನ್ನೊಳಗೇ ಸಂತೋಷಪಡುತ್ತಿದ್ದ ಸುಮಿತ್ರೆಯ ಆಶೀರ್ವಾದವನ್ನು ಪಡೆದು ತನ್ನ ಅರಮನೆಗೆ ನಡೆದನು. ಜಾನಕಿಯೂ ಅವನೊಡನೆ ಉತ್ಸಾಹದಿಂದ ನಡೆದಳು.

ದಶರಥನ ನಾಲ್ವರು ಮಕ್ಕಳಲ್ಲಿ ಶ್ರೀರಾಮಚಂದ್ರನೇ ಸರ್ವಸಮರ್ಥನಾಗಿದ್ದನು. ಆತನ ಶಾಂತಸ್ವಭಾವ, ಮೃದುವಾದ ಮಿತವಾದ ಮಾತುಗಳು, ಪರೋಪಕಾರ ಬುದ್ಧಿ, ಗುರುಹಿರಿಯರಲ್ಲಿ ಭಕ್ತಿ, ಇವುಗಳಿಂದ ಆತನು ಎಲ್ಲರಿಗೂ ಮೆಚ್ಚಿನವನಾಗಿದ್ದನು. ಇದಲ್ಲದೆ ಸೂಕ್ಷ್ಮಬುದ್ಧಿಯವನೂ ವೀರನೂ ಕರುಣಾವಂತನೂ ಆಗಿದ್ದನು. ಆದ್ದರಿಂದ ಶ್ರೀರಾಮನಿಗೆ ಪಟ್ಟಾಭಿಷೇಕವಾಗುವ ವಾರ್ತೆಯು ಅಯೋಧ್ಯೆಯಲ್ಲಿ ಪ್ರಜೆಗಳ ಸಂತೋಷದ ವಾರ್ತೆಯಾಗಿ ಹಬ್ಬಿತು.

ಮರುದಿನ ಪಟ್ಟಾಭಿಷೇಕ! ಅಯೋಧ್ಯೆಯೇ ಸಂತೋಷಸಾಗರದಲ್ಲಿದೆ ಎನ್ನುವಂತಹ ಸಡಗರ! ಪ್ರಜೆಗಳೆಲ್ಲ ವಿವಿಧ ರೀತಿಯ ಅಲಂಕಾರಗಳಲ್ಲಿ ಮಗ್ನರಾಗಿದ್ದಾರೆ. ಶ್ರೀರಾಮನ ಗುಣಗಳನ್ನು ಕೊಂಡಾಡುತಿದ್ದಾರೆ. ಕೈಕೆಯ ದಾಸಿಯಾದ ಮಂಥರೆಯು ಈ ವಾರ್ತೆಯನ್ನು ಕೇಳಿ, ಜನರ ಸಡಗರವನ್ನು ನೋಡಿ ಅಸೂಯೆಗೊಂಡು ತನ್ನ ಯಜಮಾನಿ ಇದ್ದಲ್ಲಿಗೆ ಓಡಿದಳು.

"ಅಮ್ಮಾ! ನಾಳೆ ಕೌಸಲ್ಯೆಯ ಮಗನಿಗೆ ಪಟ್ಟಾಭಿಷೇಕ! ನೀನಿನ್ನೂ ನಿದ್ದೆಮಾಡುವುದೆ?" ಎಂದು ಕೈಕೆಯನ್ನು ಎಬ್ಬಿಸಿ ಮಾತನಾಡಿದಳು. ಇದನ್ನು ಕೇಳಿ ಕೈಕೆಯು ಸಂತೋಷಗೊಂಡಳು. "ನಿಜವೇ? ಈ ಶುಭವಾರ್ತೆ ತಂದುದಕ್ಕಾಗಿ ನಿನಗಿದೋ ಉಡುಗೊರೆ" ಎಂದು ಕೊರಳ ಹಾರವನ್ನೇ ತೆಗೆದು ದಾಸಿಯ ಕೈಗೆ ನೀಡಿದಳು. ಮಂಥರೆಗೆ ತನ್ನ ಒಡತಿಯ ವರ್ತನೆಯು

ಸಿಟ್ಟಿಗೆಬ್ಬಿಸಿತು. "ಸವತಿಯ ಮಗನ ಪಟ್ಟಾಭಿಷೇಕವು ನಿನಗೆ ಸಂತೋಷವೇ? ರಾಮನಿಗೆ ಪಟ್ಟಾಭಿಷೇಕವಾದರೆ ಕೌಸಲ್ಯೆ ರಾಜಮಾತೆಯಾಗುತ್ತಾಳೆ. ನೀನು ಅವಳ ಅನ್ನಕ್ಕೆ ಬೀಳುತ್ತೀ. ಅಯ್ಯೋ ನಿನ್ನ ಬುದ್ಧಿಯೇ" ಎಂದು ತಲೆ ಜಜ್ಜಿಕೊಂಡಳು. ಹಿರಿಯ ಮಗನಾಗಿ ಸದ್ಗುಣಸಂಪನ್ನನಾಗಿ ತನ್ನ ಮೆಚ್ಚಿಗೆಯವನೂ ಆದ ರಾಮನೇ ಪಟ್ಟಕ್ಕೆ ಯೋಗ್ಯನೆಂದು ಆ ವರೆಗೂ ತಿಳಿದಿದ್ದ ಕೈಕೆಗೆ ಮಂಥರೆಯ ಮತ್ಸರದ ಸುಳಿವೇ ಆಗಲಿಲ್ಲ. ಇದನ್ನು ತಿಳಿದ ಆ ಕೆಟ್ಟ ದಾಸಿ ಬೇರೆ ಉಪಾಯ ತೆಗೆದಳು. ಕೋಪದಿಂದ ಕೈಕೆಗೆ ಎಚ್ಚರಿಸಿದಳು. ಕೊನೆಯಲ್ಲಿ ಕೂಗಿದಳು. "ಅಯ್ಯೋ! ಭರತಾ! ನಿನ್ನ ತಾಯಿ ನಿನ್ನನ್ನೂ ದಾಸನನ್ನಾಗಿ ಮಾಡಿದಳು. ತಾನು ಕೌಸಲ್ಯೆಯ ಸೇವಕಿಯಾದಳು. ಅಯ್ಯೋ! ಮೆಚ್ಚಿನ ರಾಣಿಯೆಂದು ಮಹಾರಾಜನೂ ಹೀಗೆ ವಂಚಿಸುವುದೇ? ದೇವರೇ ನನಗಿನ್ನಾರು ಗತಿ? ಭರತಕುಮಾರನಿಗಾರು ಗತಿ?" ಎಂದು ಬಿಕ್ಕಿ ಬಿಕ್ಕಿ ಅತ್ತಳು.

ಇದನ್ನು ನೋಡಿದ ಕೈಕೆ ಯೋಚಿಸತೊಡಗಿದಳು. ಸುಂದರಿಯಾದ ಕೈಕೆಯ ಮನಸ್ಸು ಬದಲಾಗತೊಡಗಿತು. "ಶ್ರೀರಾಮನು ರಾಜನಾದರೆ ಕೌಸಲ್ಯೆ ರಾಜಮಾತೆಯಾಗುತ್ತಾಳೆ. ನಾನು ಕೌಸಲ್ಯೆಯ ಕೈಕೆಳಗಿನವಳಾಗುತ್ತೇನೆ. ನನ್ನ ಭರತನು ರಾಮನ ಆಳಾಗುತ್ತಾನೆ. ಅದರ ಬದಲು ಭರತಕುಮಾರನು ರಾಜನಾದರೆ ನಾನು ರಾಜಮಾತೆಯಾಗುತ್ತೇನೆ. ಎಲ್ಲ ಗೌರವಗಳೂ ನನಗೇ ಸಲ್ಲುತ್ತವೆ. ಕೌಸಲ್ಯೆ ನಾನು ಹೇಳಿದಂತೆ ಕೇಳಬೇಕು. ರಾಮನು ಭರತನ ಅಪ್ಪಣೆಯಂತೆ ನಡೆಯಬೇಕು" ಎಂದು ಮುಂತಾಗಿ ಅವಳ ಮನಸ್ಸು ಮೆಲುಕುಹಾಕತೊಡಗಿತು. ಮಂಥರೆಯ ಮಾಟ ಫಲಿಸಿತು. ಕೈಕೆ ದಾಸಿಯ ಬಳಿಗೆ ಹೋಗಿ "ಮಂಥರೆ ಇಲ್ಲಿ ಬಾ!" ಎಂದು ಕರೆದು ಅವಳಿಂದ ರಾಮನ ಪಟ್ಟಾಭಿಷೇಕದಿಂದ ತನಗಾಗುವ ಸಂಕಷ್ಟಗಳನ್ನೆಲ್ಲ ಮತ್ತೊಮ್ಮೆ ತಿಳಿದುಕೊಂಡಳು. ದಶರಥನು ತನ್ನನ್ನು ವಂಚಿಸಿದನೆಂದು ಅವನನ್ನೂ ಜರೆದಳು. ಕೋಪಿಸಿಕೊಂಡಳು. ಕೊನೆಗೆ ಅವರಿಬ್ಬರೂ ಕೂಡಿ ಯೋಚಿಸಿದರು. ಮಂಥರೆ ಎಲ್ಲವನ್ನೂ ಸುಲಭವಲ್ಲೇ ತಿಳಿಸಿದಳು.

"ಯಾಕಮ್ಮ ಇಷ್ಟು ಆಲೋಚನೆ? ರಾಜನು ನಿನಗಿತ್ತ ಎರಡು ವರ

ಗಳಿವೆಯಲ್ಲ. ಅದನ್ನಿಂದು ಕೇಳು. ಒಂದು ವರದಲ್ಲಿ ಭರತನಿಗೆ ಪಟ್ಟಾಭಿಷೇಕವಾಗಬೇಕೆಂದೂ ಎರಡನೆ ವರದಲ್ಲಿ ರಾಮನು ಹದಿನಾಲ್ಕು ವರ್ಷ ಕಾಡಿಗೆ ಹೋಗಬೇಕೆಂದೂ ಬೇಡಿಕೊ. ಇದರಿಂದ ಎಲ್ಲವೂ ಸರಿಯಾಗುವುದು."

ಕೈಕೆಗಿದು ಸರಿಯೆಂದೇ ತೋರಿತು! ಭರತನಿಗೆ ಪಟ್ಟಾಭಿಷೇಕವಾಗಿ ಅವನು ರಾಜನಾಗಿರುವಾಗ ರಾಮನು ಅಯೋಧ್ಯೆಯಲ್ಲಿದ್ದರೆ ತೊಂದರೆಯುಂಟೆಂದು ಅವಳೂ ತಿಳಿದಳು. ಮಂಥರೆಯ ಸೂಕ್ಷ್ಮಬುದ್ಧಿಗಾಗಿ ಅವಳನ್ನು ಮತ್ತೂ ಹೊಗಳಿ ತಾನೇ ಅವಳ ಕೊರಳಿಗೆ ತನ್ನ ಹಾರವನ್ನು ಹಾಕಿದಳು.

"ಅಮ್ಮಾ! ಕೆಲಸವಿಷ್ಟರಿಂದ ಆಗಲಿಲ್ಲ. ಈಗ ನೀನು ಈ ಅಲಂಕಾರಗಳನ್ನೆಲ್ಲ ತೆಗೆದು ಕೋಣೆಯಲ್ಲಿ ಅಳುತ್ತಾ ಬಿದ್ದಿರು. ದಶರಥನು ಬಂದು ಸಂತೈಸುವಾಗ ಅವನಿಂದ ವರಗಳನ್ನು ಪಡೆದುಕೋ! ಎಚ್ಚರದಿಂದಿರು" ಎಂದಳು.

ಅಷ್ಟರಲ್ಲೇ ತನ್ನ ಪ್ರೇಮದ ಮಡದಿಯನ್ನು ಕಾಣುವುದಕ್ಕಾಗಿ ದಶರಥನೇ ಕೈಕಾದೇವಿಯ ಅಂತಃಪುರಕ್ಕೆ ಬಂದನು. ಚೆಲುವಿನ ನೆಲೆಮನೆಯಾಗಿರುವ ಕೈಕೆಯ ಅಂತಃಪುರವು ಮೌನವಾಗಿತ್ತು. ರಾಜನು ಕೈಕೆಯನ್ನು ಕಾಣದೆ ಕಾತರನಾಗಿ ವಿಚಾರಿಸಿದನು. ದಾಸಿಯೊಬ್ಬಳು ಅಂಜುತ್ತ ಕೋಪಗೃಹವನ್ನು ತೋರಿಸಿದಳು. ದಶರಥನು ಅಲ್ಲಿಗೆ ಹೋದನು. ತಾನು ಬಂದಾಗ ಅಲಂಕೃತಳಾದ ಕೈಕೆಯು ಬಂದು ಸ್ವಾಗತಿಸುವುದು ಅವನಿಗೆ ವಾಡಿಕೆಯಾಗಿತ್ತು. ಇಂದಿನ ಈ ಸ್ಥಿತಿಯನ್ನು ಅವನು ತಿಳಿಯದಾದನು. ಒಳಪ್ರವೇಶಿಸಿ ನೋಡಿದನು. ಕೈಕೆಯು ಅಲಂಕಾರಗಳಿಲ್ಲದೆ ಮಲಿನವಸ್ತ್ರ ಧರಿಸಿ, ನೆಲದ ಮೇಲೆ ಬಿದ್ದಿದ್ದಾಳೆ. ತಲೆಗೂದಲು ಅಸ್ತವ್ಯಸ್ತವಾಗಿದೆ.

ದಶರಥನು ಮೆಲ್ಲಗೆ ತನ್ನ ಪ್ರೇಮದ ರಾಣಿಯನ್ನು ಮಾತನಾಡಿಸಿದನು. "ಕೈಕಾ ನಿನಗೇನಾಯಿತು? ಯಾರೇನು ಹೇಳಿದರು? ಏಳು; ನಿನ್ನ ಇಷ್ಟಾರ್ಥವೇನಿದ್ದರೂ ಸಲ್ಲಿಸುವೆನು." ಆಗ ಕೈಕೆ ತಾನು ಗೆದ್ದೆನೆಂದು ಭಾವಿಸಿದಳು. "ಹಾಗೆಂದು ಭಾಷೆ ಕೊಡಿರಿ. ನನ್ನ ಬಯಕೆಯನ್ನು ನೆರವೇರಿಸುತ್ತೇನೆಂದು ಆಣೆಮಾಡಿರಿ." ತೆಗೆದುಕೊ ಭಾಷೆಯೆಂದು ಅರಸನು

ಕೈಕೆಗೆ ಮಾತುಕೊಟ್ಟನು. ತನ್ನ ಪ್ರಾಣಕ್ಕಿಂತಲೂ ಮೇಲಾದ ಶ್ರೀರಾಮನ ಮೇಲೆ ಆಣೆಯಿಟ್ಟು ಮಾತುಕೊಟ್ಟನು. ಕೂಡಲೆ ಕೈಕೆಯು ಮಂಥರೆಯ ಮಾತುಗಳನ್ನು ಒಪ್ಪಿಸಿದಳು. "ದೇವಾ! ದೇವಾಸುರ ಯುದ್ಧದಲ್ಲಿ ನೀವು ನನಗೆ ಕೊಟ್ಟ ಆ ಎರಡು ವರಗಳನ್ನು ನನಗೀಗ ಕೊಡಿರಿ. ಭರತಕುಮಾರ ನಿಗೆ ರಾಜ್ಯಾಭಿಷೇಕ ಮಾಡಿಸಬೇಕೆಂಬುದೆ ಒಂದನೆ ವರ. ಭರತನ ರಾಜ್ಯವು ಕಂಟಕವಿಲ್ಲದಂತಾಗಲು ರಾಮನನ್ನು ಹದಿನಾಲ್ಕು ವರ್ಷ ಕಾಡಿಗೆ ಕಳುಹಿಸ ಬೇಕೆಂಬುದೆ ಎರಡನೆ ವರವು" ಎಂದು ಹೇಳಿ ರಾಜನನ್ನೇ ನೋಡಿದಳು.

ರಾಜನಿಗೆ ಒಮ್ಮೆಗೇ ಸಾವಿರ ಚೇಳುಗಳು ಕಚ್ಚಿದಂತಾಯಿತು. ಕಿವಿಗೆ ಬಿದ್ದ ಮಾತುಗಳು ಈಟಿಯಿಂದ ತಿವಿದಂತೆ ಆಯಿತು. ಖಡ್ಗದಿಂದ ಎದೆ ಯನ್ನು ಇರಿದಂತೆ ಆಯಿತು. ಬಾಯಿಗೆ ಬಂದ ಮಾತನ್ನು ಆಡುವ ಚೈತನ್ಯ ವಿಲ್ಲದೆ ದಶರಥನು ನೆಲಕ್ಕೆ ಬಿದ್ದು ಮೂರ್ಛೆಗೊಂಡನು. ಸ್ವಲ್ಪ ಹೊತ್ತಿನ ಮೇಲೆ ಎಚ್ಚರಗೊಂಡನು. ಅವನು ಮತ್ತೆ ಕೈಕೆಯ ಮಾತುಗಳನ್ನು ನೆನಪುಮಾಡಿದನು. ಶ್ರೀರಾಮನಲ್ಲಿ ಅಷ್ಟು ಪ್ರೀತಿಯಿದ್ದ ಕೈಕೆಯೇಕೆ ಹೀಗೆ ಕೇಳಿದಳೆಂದು ಅವನು ತಿಳಿಯದಾದನು. ಕೈಕೆಯನ್ನೇ ನೋಡಿದನು. ಚೆಲುವಿನ ಕೈಕಾರಾಣಿ ಅವನಿಗೆ ವಿಷಸರ್ಪಿಣಿಯಂತೆ ಕಂಡಳು. "ಕೈಕೆ ರಾಮನನ್ನು ಅಡವಿಗೆ ಅಟ್ಟಬೇಡ. ಹಿರಿಯ ಕುಮಾರನಿರುವಾಗ ಕಿರಿಯನಿಗೆ ಪಟ್ಟಕಟ್ಟುವುದು ನಮ್ಮ ಪದ್ಧತಿಯಲ್ಲ. ಈ ಛಲವನ್ನು ಬಿಡು. ಪ್ರಸನ್ನ ಳಾಗು" ಎಂದು ರಾಜನು ಹೇಳಿದನು. ಆಕೆ ಕೇಳಲಿಲ್ಲ. ಅವನು ಆಕೆ ಯನ್ನು ಗದರಿಸಿ ನಿಂದಿಸಿದನು. ಕೈಕೆ ತನ್ನ ನಿರ್ಧಾರವನ್ನು ಬದಲಾಯಿಸ ಲಿಲ್ಲ. ಅವನಾಗ ಮಗುವಿನಂತೆ ಅಳುತ್ತಾ ಆಕೆಯನ್ನು ಹೀಗೆ ಮಾಡ ಬೇಡವೆಂದು ಬೇಡಿಕೊಂಡನು. ಆದರೆ ಆ ದುಷ್ಟ ಹೆಂಗಸು ಕೋಪದಿಂದ ಕಿಡಿಕಿಡಿಯಾದಳು. "ನನಗೀಗ ತಿಳಿಯಿತು ನಿಮ್ಮ ಹಂಚಿಕೆ. ಭರತ ಶತ್ರುಘ್ನ ರನ್ನು ಮಾವನ ಮನೆಗೆ ಕಳುಹಿಸಿದ್ದು ಏಕೆಂದೂ ತಿಳಿಯಿತು. ಅಯ್ಯೋ ನಿಮ್ಮ ತಂತ್ರವೇ! ಪ್ರೇಮದ ಮಾತುಗಳನ್ನಾಡಿ ನನ್ನನ್ನು ತೊತ್ತನ್ನಾಗಿ ಮಾಡಿ ದಿರಿ. ಕೊಟ್ಟ ಮಾತನ್ನು ನಡಿಸಲಾರದ ನಿಮ್ಮಿಂದ ಸೂರ್ಯಕುಲಕ್ಕೆ ಅವಮಾನ" ಎಂದು ಭಂಗಿಸಿ ಮಾತನಾಡಿದಳು. ಈ ಮಾತುಗಳನ್ನು ಕೇಳಿ ದಶರಥನು ಸಿಡಿಲು ಬಡಿದವನಂತೆ ಬಲವಿಲ್ಲದೆ ಕುಸಿದುಬಿದ್ದನು.

ಮರುದಿನ ಬೆಳಗಾಯಿತು. ಅಯೋಧ್ಯೆಯೇ ಅಲಂಕಾರಗೊಂಡಂತೆ ಇತ್ತು. ಸಿಂಗರಿಸಿದ ಮನೆಮಠಗಳು! ಸಿಂಗರಿಸಿದ ಬೀದಿಗಳು! ಅಲಂಕಾರಗೊಂಡ ಜನರು! ಎಲ್ಲೆಲ್ಲೂ ಮಂಗಳವಾದ್ಯಗಳು ಮೊಳಗುತ್ತಿವೆ! ವಸಿಷ್ಠ ಮಹರ್ಷಿಗಳು ತನ್ನ ಶಿಷ್ಯರೊಂದಿಗೆ ಪಟ್ಟಾಭಿಷೇಕ ಸಾಮಗ್ರಿಗಳೊಂದಿಗೆ ಬಂದರು. ಸುಮಂತ್ರನನ್ನು ಕರೆದು ರಾಜನನ್ನು ಕರೆತರಲು ಹೇಳಿದರು. ಸುಮಂತ್ರನು ಕೂಡಲೆ ರಾಜನ ಅಂತಃಪುರಕ್ಕೆ ಹೋಗಿ ಮುಂಜಾನೆಯ ಮಂಗಳಶಾಸನವನ್ನು ಹೇಳಿದನು. ಇದನ್ನು ಕೇಳಿದ ದಶರಥನು ಮತ್ತಷ್ಟು ನೊಂದುಕೊಂಡನು. ಅವನ ಶೋಚನೀಯ ಸ್ಥಿತಿಯನ್ನು ಕಂಡ ಸುಮಂತ್ರನು ಅಲ್ಲಿಂದ ಹಿಂತಿರುಗಿದನು. ಅಷ್ಟರಲ್ಲಿ ಕೈಕೆ ಅವನನ್ನು ಕರೆದು ಶ್ರೀರಾಮನನ್ನು ಅಲ್ಲಿಗೆ ಕರೆದುತರಲು ಹೇಳಿದಳು. ಸುಮಂತ್ರನು ಒಡನೆಯೇ ರಾಮನಲ್ಲಿಗೆ ಧಾವಿಸಿದನು.

ಶ್ರೀರಾಮನು ವಸ್ತ್ರಾಭರಣಗಳಿಂದ ಅಲಂಕಾರಗೊಂಡು ತನ್ನ ಅಂತಃಪುರದಲ್ಲಿದ್ದನು. ಸೀತಾದೇವಿ ತನ್ನ ಪತಿಗೆ ಚಾಮರ ಬೀಸುತ್ತಿದ್ದಳು. ಆಗಲೇ ಸುಮಂತ್ರನು ಅಲ್ಲಿಗೆ ಬಂದನು. ಕೈಕೆಯ ಅಂತಃಪುರದಲ್ಲಿ ಮಹಾರಾಜನು ರಾಮನನ್ನು ಕಾಣಬಯಸುತ್ತಾನೆಂದು ತಿಳಿಸಿದನು. ಕೂಡಲೇ ರಾಮನು ಹೊರಟನು. ದಾರಿಯಲ್ಲಿ ಕಿಕ್ಕಿರಿದ ಜನಸ್ತೋಮ ರಾಮನನ್ನು ಕಂಡಾಗಲೆಲ್ಲ ಜಯಘೋಷ ಮಾಡಿತು. ಮುತ್ತೈದೆಯರು ಮಹಡಿಯ ಮೇಲಿಂದಲೇ ಅವನ ಮೇಲೆ ಹೂವಿನ ಮಳೆಸುರಿಸಿದರು. ರಾಮನು ಅವರಿಗೆಲ್ಲ ಕೈಮುಗಿಯುತ್ತಾ ಬಂದು ಕೈಕೆಯ ಅಂತಃಪುರವನ್ನು ಹೊಕ್ಕನು. ತಂದೆತಾಯಿಗಳಿಗೆ ವಂದಿಸಿದನು.

ರಾಮನನ್ನು ಕಂಡೊಡನೆ ದಶರಥನಿಗೆ ದುಃಖ ಉಕ್ಕಿಬಂತು. ಮಾತು ಬಾರದಾಯಿತು. "ರಾಮಾ!" ಎಂದವನೇ ಬಳಬಳ ಕಣ್ಣೀರು ಸುರಿಸುತ್ತ ಮೂಕನಂತೆ ಕುಳಿತನು. ಅದನ್ನು ಕಂಡು ರಾಮನಿಗೆ ಏನೊಂದೂ ತಿಳಿಯಲಿಲ್ಲ. ಅಷ್ಟರಿಂದವನು ಕೈಕೆಯನ್ನು ವಿಚಾರಿಸಿದನು. ಅವಳು ಎಲ್ಲವನ್ನೂ ಹೇಳಿದಳು. "ಕೊಟ್ಟ ಮಾತನ್ನು ನಡೆಸಲಾರದೆ ಇವರೀಗ ಅಳುತ್ತಿದ್ದಾರೆ. ನಿನ್ನ ತಂದೆಯ ಮಾತನ್ನು ನಡೆಸುವವನು ನೀನಾದರೆ ನೀನೀಗಲೆ ಹದಿನಾಲ್ಕು

ವರ್ಷದ ವನವಾಸವನ್ನು ಕೈಕೊಳ್ಳು." ಈ ಮಾತುಗಳನ್ನು ಕೇಳಿ ರಾಮನು ವಿಕಾರಗೊಳ್ಳಲಿಲ್ಲ, ಹೆದರಲಿಲ್ಲ. ಅವನ ಮುಖದ ಪ್ರಸನ್ನತೆ ಒಂದಿಷ್ಟೂ ಮಾಸಲಿಲ್ಲ. "ಅಮ್ಮಾ! ಇಷ್ಟೇ ಏನು? ಇಗೋ ನಿನ್ನ ಇಷ್ಟದಂತೆ ವನವಾಸ ವನ್ನು ಕೈಕೊಳ್ಳುತ್ತೇನೆ. ಭರತನಿಗೆ ಪಟ್ಟವಾಗುವುದು ನನಗೂ ಸಂತೋಷವೆ! ತಂದೆಗಾಗಿ ನಾನು ರಾಜ್ಯತ್ಯಾಗಮಾಡಲು ಸಿದ್ಧನೆ!" ಎಂದನು. ಅನಂತರ ಭರತನನ್ನು ಕೂಡಲೆ ಕರೆಯಿಸಿ ಅವನಿಗೆ ಪಟ್ಟಕಟ್ಟಬೇಕೆಂದೂ ಕಂಬನಿಗರೆಯು ತ್ತಿರುವ ತಂದೆಯನ್ನು ಸಂತೈಸಬೇಕೆಂದೂ ತಾನು ಕೌಸಲ್ಯೆಗೆ ತಿಳಿಸಿ ಅಪ್ಪಣೆ ಬೇಡಿ ಬರುವೆನೆಂದೂ ಹೇಳಿ ರಾಮನು ಅಲ್ಲಿಂದ ಹೊರಟನು. ಇದನ್ನು ಕೇಳಿದ ದಶರಥನು "ಹಾ ರಾಮ! ಹಾ ರಾಮ!" ಎನ್ನುತ್ತ ಗೋಳಾಡಿದನು.

ಶ್ರೀರಾಮನು ಕೈಕೆಯ ಅಂತಃಪುರದಿಂದ ಹೊರಗೆ ಬರುವಾಗಲೇ ಲಕ್ಷ್ಮಣನನ್ನು ಕಂಡನು. ಅವರಿಬ್ಬರೂ ಅಲ್ಲಿಂದ ಕೌಸಲ್ಯೆಯ ಅರಮನೆಗೆ ಬಂದರು. ಅವಳಾಗ ದೇವರ ಪೂಜೆಯಲ್ಲಿದ್ದಳು. ರಾಮನಿಗೆ ಮಂಗಲವನ್ನು ಕೋರಿ ಪ್ರಾರ್ಥನೆ ಮಾಡಿದಳು. ಅನಂತರ ಮೇಲೆದ್ದು ಶ್ರೀರಾಮನನ್ನು ಹರಸಿದಳು. "ರಘುವಂಶದ ರಾಜರ್ಷಿಗಳಂತೆ ನೀನೂ ಕೀರ್ತಿಶಾಲಿಯಾಗು" ಎಂದು ಆಶೀರ್ವಾದ ಮಾಡಿದಳು. ತಾಯಿಯ ಸಡಗರವನ್ನು ಕಂಡು ರಾಮನು ಮನದಲ್ಲೇ ನಾಚಿದನು. ಆ ಮೇಲೆ ತಂದೆಯು ತನಗೆ ಹದಿ ನಾಲ್ಕು ವರ್ಷಗಳ ವನವಾಸ ವಿಧಿಸಿರುವುದರಿಂದ ತಾನು ದಂಡಕಾರಣ್ಯಕ್ಕೆ ಅಂದೇ ಹೋಗುವೆನೆಂದೂ ಭರತನಿಗೆ ಪಟ್ಟಾಭಿಷೇಕವಾಗುವುದೆಂದೂ ತಿಳಿ ಸಿದನು. ಈ ಮಾತು ಕೇಳಿ ಕೌಸಲ್ಯೆಗೆ ಸಿಡಿಲೇ ಬಡಿದಂತಾಯಿತು. ಆಕೆ ನೆಲಕ್ಕೆ ಬಿದ್ದು ಮೂರ್ಛಿತಳಾದಳು. ರಾಮನು ಅವಳನ್ನು ಉಪಚರಿಸಿ ಎಚ್ಚರಿಸಿದನು. ಎಚ್ಚರಗೊಂಡ ಅವಳು ರಾಮನ ದುರ್ದಶೆಗಾಗಿ ಗೋಳಾಡಿ ದಳು. ತನ್ನನ್ನು ತಾನೇ ಹಳಿದುಕೊಂಡಳು. "ಪಟ್ಟದ ರಾಣಿಯೆನಿಸಿದರೂ ಪತಿಯಿಂದ ವಂಚಿತಳಾಗಿದ್ದೆ. ಕೈಕೆಯ ಮಗನು ಪಟ್ಟಕ್ಕೆ ಬಂದ ಮೇಲೆ ನನಗೆಂತಹ ಕಷ್ಟಬರುವುದೋ! ಮಗೂ, ನನ್ನನ್ನೂ ಅರಣ್ಯಕ್ಕೆ ಕರೆದೊಯ್ಯು" ಎಂದು ದುಃಖಿಸಿದಳು.

ಇದನ್ನು ಕೇಳಿದ ಲಕ್ಷ್ಮಣನಿಗೆ ಕೋಪ ಕೆರಳಿತು. "ಅಮ್ಮಾ! ಅಣ್ಣ

ನೀಗ ರಾಜ್ಯತ್ಯಾಗ ಮಾಡುತ್ತಿರುವುದು ನನಗೆ ಸರಿಕಾಣುವುದಿಲ್ಲ. ಇದು ಅಕಾರ್ಯವೆಂದೇ ನನಗೆ ತೋರುವುದು" ಎಂದು ಕೌಸಲ್ಯೆಯೊಡನೆ ಹೇಳಿದನು. "ಅಣ್ಣಾ! ಚಿಕ್ಕತಾಯಿಯ ಮಾತಿಗೆ ಮರುಳಾಗಿರುವ ನಮ್ಮ ತಂದೆಯ ಈ ಮಾತು ಸರ್ವಥಾ ನ್ಯಾಯವಾದುದಲ್ಲ. ಆದ್ದರಿಂದ ನೀನಿದನ್ನು ಒಪ್ಪಿಕೊಳ್ಳಬಾರದು. ಇದೋ! ಈ ಲಕ್ಷ್ಮಣನು ಧನುರ್ಧಾರಿಯಾಗಿ ನಿನ್ನ ಬಳಿ ನಿಲ್ಲುವನು. ನಿನ್ನನ್ನು ರಾಜ್ಯದಿಂದ ಹೊರತಳ್ಳುವವರನ್ನೆಲ್ಲ ತರಿದುಬಿಡುತ್ತೇನೆ. ಮಹಾರಾಜನು ಭರತನಿಗೆ ಹೇಗೆ ರಾಜ್ಯವನ್ನು ಕೊಡುತ್ತಾನೊ ನೋಡುವೆನು" ಎಂದು ಧೀರಮಾತುಗಳನ್ನಾಡಿದನು. ಲಕ್ಷ್ಮಣನ ಮಾತುಗಳು ಕೌಸಲ್ಯೆಗೆ ಸರಿಯೆನಿಸಿದುವು. ಆಕೆ ರಾಮನೊಡನೆ ಅಂತೇ ಮಾಡೆಂದಳು. ಆದರೆ ರಾಮನ ದೃಢಮನಸ್ಸು ಕದಲಲಿಲ್ಲ. ಅವನು ಅವರಿಬ್ಬರನ್ನೂ ಸಮಾಧಾನಪಡಿಸಿದನು. ತಂದೆಯ ಮಾತು ಸಲ್ಲಿಸುವೆನೆಂದನು.

"ಅಮ್ಮಾ! ಪಿತೃವಾಕ್ಯ ಪರಿಪಾಲನೆಯೇ ನಮಗೀಗ ಧರ್ಮವಾಗಿದೆ. ಹಿರಿಯನಾದ ತಂದೆಯ ಮಾತನ್ನು ಪಾಲಿಸುವುದೇ ಮಕ್ಕಳಾದ ನಮ್ಮ ಕರ್ತವ್ಯ. ಹಿರಿಯರ ಅಪ್ಪಣೆಯನ್ನು ವಿಧೇಯರಾಗಿ ನಡಿಸುವುದು ಕಿರಿಯರಿಗೆ ಶ್ರೇಯಸ್ಸನ್ನು ಉಂಟುಮಾಡುವುದು. ಅಮ್ಮಾ! ನೀನಾದರೂ ಪತಿಯಿರುವಾಗ ನನ್ನೊಡನೆ ಕಾಡಿಗೆ ಬರುವುದು ಸರಿಯಲ್ಲ. ಅವನ ಸೇವೆಯಲ್ಲಿ ನಿರತಳಾಗಿರಬೇಡವೆ?"

ಪರಾಕ್ರಮಿಯಾದ ಲಕ್ಷ್ಮಣನಿಗೆ ಧರ್ಮವೆಂಬುದು ದುರ್ಬಲರ ಅಸ್ತ್ರವೆಂದೆನಿಸುತಿತ್ತು. ಕ್ಷತ್ರಿಯರು ಪುರುಷಪ್ರಯತ್ನವನ್ನು ಪುರಸ್ಕರಿಸಬೇಕೆಂದೇ ಅವನ ಮತ. ಆದ್ದರಿಂದಲೇ ರಾಮನ ಮಾತು ಅವನಿಗೆ ಸರಿಯೆನಿಸಲಿಲ್ಲ. ಅವನು ಮತ್ತೂ ಸಿಟ್ಟಿನಲ್ಲೇ ಇದ್ದನು. ಆಗ ರಾಮನು ಅವನ ಕೈಹಿಡಿದು ಮಾತನಾಡಿದನು. "ಮನುಷ್ಯನು ಪುರುಷಪ್ರಯತ್ನದಿಂದ ಮುನ್ನಡೆಯಬೇಕಾದರೂ ವಿಧಿವಶದಿಂದಾಗುವುದು ಆಗಿಯೇ ಆಗುತ್ತದೆ. ಆಗ ಅವನು ಅಳುಕಬಾರದು" ಎಂದು ಹೇಳುತ್ತಾ ರಾಮನು ಜನಕನ ಆಜ್ಞೆಗೆ ಒಳಗಾಗಿರುವುದೇ ಸರಿಯೆಂದು ತಿಳಿಸಿದನು. ಮಗನ ನಿರ್ಧಾರದ ಮುಂದೆ ತಾಯಿಯ ವಾತ್ಸಲ್ಯದ ಮಾತು ನಡೆಯಲಿಲ್ಲ. ಆಕೆ ಕೊನೆಗೆ ರಾಮನಿಗೆ ಅರಣ್ಯಕ್ಕೆ

ಹೋಗಲು ಅನುಮತಿ ಇತ್ತಳು. "ಹೋಗಿ ಬಾ ಕಂದ! ಅರಣ್ಯದಲ್ಲಿರು ವಾಗ ನಿನಗೆ ಯಾವ ಬಾಧೆಯೂ ಆಗದಂತೆ ದೇವತೆಗಳು ರಕ್ಷಿಸಲಿ" ಎಂದು ಕಂಬನಿ ಸುರಿಸುತ್ತಾ ಹರಸಿದಳು. ರಾಮನು ಆಕೆಗೆ ಸಾಷ್ಟಾಂಗ ನಮಸ್ಕಾರಮಾಡಿ ಸೀತೆಯ ಅಂತಃಪುರಕ್ಕೆ ತೆರಳಿದನು.

ಇನ್ನು ಸ್ವಲ್ಪ ಹೊತ್ತಿನಲ್ಲೇ ತನ್ನ ಪತಿಗೆ ಪಟ್ಟಾಭಿಷೇಕವಾಗುವುದು ಎಂಬ ಸಂತೋಷದಿಂದ ಆಕೆ ಅದಕ್ಕೆ ತಕ್ಕ ಉಡಿಗೆತೊಡಿಗೆಗಳಿಂದ ಅಲಂ ಕೃತಳಾಗಿ ಸಂಭ್ರಮದಿಂದ ಪತಿಯನ್ನು ಇದಿರು ನೋಡುತಿದ್ದಳು. ದೂರ ದಿಂದಲೇ ಬರುತ್ತಿರುವ ಶ್ರೀರಾಮನನ್ನು ಕಂಡು ಸಂತೋಷಗೊಂಡಳು. ಆದರೆ ಅವನು ಸಮೀಪಕ್ಕೆ ಬಂದಾಗ ಅವನ ಕಂದಿದ ಮುಖವನ್ನು ಕಂಡು ಭಯಗೊಂಡಳು. ತನ್ನ ಭಯವನ್ನು ಮಾತಿನಿಂದಲೂ ವ್ಯಕ್ತಪಡಿಸಿದಳು. "ಶುಭಮುಹೂರ್ತದಲ್ಲಿ ಈ ಉದಾಸೀನವೇಕೆ? ಎಂದು ಕೇಳಿದಳು. ಸೀತೆಯ ತಳಮಳವನ್ನು ಕಂಡು ರಾಮನಿಗೂ ಸಂಕಟವಾಯಿತು. ಆದರೂ ನಡೆದ ಸಂಗತಿಯನ್ನು ಆಕೆಗೆ ಸಮಾಧಾನದಿಂದ ತಿಳಿಸಿದನು. "ತಂದೆಯ ಮಾತನ್ನು ಪಾಲಿಸುವುದಕ್ಕಾಗಿ ನಾನಿಂದು ಕಾಡಿಗೆ ಹೋಗುವೆನು. ನೀನು ಅರಮನೆ ಯಲ್ಲಿದ್ದು ಹಿರಿಯರ ಸೇವೆಮಾಡುತ್ತಿರು."

ಶ್ರೀರಾಮನ ಮಾತುಗಳನ್ನು ಕೇಳಿದ ಸೀತಾದೇವಿಗೆ ಕೋಪವೂ ದುಃಖವೂ ಒಮ್ಮೆಗೇ ಬಂತು. ಆದರೂ ಆಕೆ ಅವುಗಳನ್ನು ನುಂಗಿಕೊಂಡಳು. "ಪತ್ನಿಯು ಪತಿಯ ಅರ್ಧಾಂಗಿಯಲ್ಲವೆ? ಗಂಡನನ್ನು ಹೆಂಡತಿ ನೆರಳಿನಂತೆ ಅನುಸರಿಸಬೇಡವೆ? ನೀನು ಕಾಡಿಗೆ ಹೋದರೆ ನಾನೂ ಬರುವೆನು. ನಿನ್ನೊ ಡನಿರುವ ಅರಣ್ಯವಾಸವು ನನಗೆ ಅರಮನೆಯ ವಾಸದಂತೆಯೆ! ನಾನು ಏನಾದರೂ ನಿನ್ನೊಡನೆ ಬರುವವಳೇ." ಈ ಮಾತಿನಿಂದ ಶ್ರೀರಾಮನಿಗೂ ಸಂಕಟವಾಯಿತು. ಕೋಮಲೆಯಾದ ಸೀತೆಯನ್ನು ಅರಣ್ಯಕ್ಕೊಯ್ಯುವುದೂ ಸರಿಯಲ್ಲ. ಅರಮನೆಯಲ್ಲಿ ಬಿಡುವುದೂ ಸರಿಯಲ್ಲ. ಹೀಗೆ ಅವನ ಮನಸ್ಸು ಚಿಂತೆಗೆ ಒಳಗಾಯಿತು. ಅವನು ಅರಣ್ಯವು ಭಯಂಕರವಾಗಿದೆಯೆಂದು ಎಷ್ಟು ವಿಧವಾಗಿ ಹೇಳಿದರೂ ಆಕೆ ತಾನು ಬರುವವಳೇ ಎಂದು ಹಟ ಹಿಡಿದಳು. "ಕೊನೆಗೂ ನನ್ನನ್ನು ಬಿಟ್ಟುಹೋಗುವುದಾದರೆ ನಾನು ವಿಷ

ತಿಂದೋ ಬಾವಿಗೆ ಬಿದ್ದೋ ಪ್ರಾಣ ಕಳೆದುಕೊಳ್ಳುವೆನು" ಎಂದು ತಿಳಿಸಿದಳು.

ಶ್ರೀರಾಮನು ನಿರುಪಾಯನಾಗಿ ಸೀತೆಯ ಮಾತಿಗೊಪ್ಪಿದನು. ಶ್ರೀರಾಮನು ಸೀತೆಯನ್ನು ಅರಣ್ಯವಾಸಕ್ಕೆ ಕರೆದೊಯ್ಯುವನೆಂದು ಲಕ್ಷ್ಮಣನೂ ರಾಮನೊಂದಿಗೆ ಬರುವೆನೆಂದು ತಿಳಿಸಿದನು. "ಅಣ್ಣಾ! ಈ ವರೆಗೂ ನಿನ್ನೊಡನೆಯೇ ಇದ್ದ ನನಗೆ ನಿನ್ನನ್ನು ಬಿಟ್ಟಿರುವುದು ಸಾಧ್ಯವಿಲ್ಲ. ನಿನ್ನೊಡನೆ ಸುಖಸಂತೋಷದಲ್ಲಿ ದಿನಗಳೆದ ನಾನು ಈಗ ನಿನ್ನ ಕಷ್ಟಕಾಲದಲ್ಲಿ ಮಾತ್ರ ಈ ಅರಮನೆಯಲ್ಲಿರಲೇ? ನಾನೆಂದಿಗೂ ಇಲ್ಲಿರಲಾರೆ. ಅರಣ್ಯದಲ್ಲಿ ನಿಮ್ಮ ಸೇವೆಮಾಡಿಕೊಂಡಿರುವೆನು" ಎಂದನು. ಶ್ರೀರಾಮನು ನಾನಾ ರೀತಿಯಿಂದ ಸಮಾಧಾನಪಡಿಸಿದರೂ ಲಕ್ಷ್ಮಣನು ಕೇಳಲಿಲ್ಲ. ಕೊನೆಗೆ ಅವನನ್ನೂ ವನವಾಸಕ್ಕೆ ಕರೆದೊಯ್ಯಲು ಒಪ್ಪಬೇಕಾಯಿತು. ಅನಂತರ ಲಕ್ಷ್ಮಣನು ರಾಮನ ಆಜ್ಞೆಯಂತೆ ಆಪ್ತಬಂಧುಗಳಿಗೆ ಅವರು ಕಾಡಿಗೆ ಹೋಗುವುದನ್ನು ತಿಳಿಸಿ ವಸಿಷ್ಠರಲ್ಲಿದ್ದ ಅವರಿಬ್ಬರ ಧನುಸ್ಸುಗಳನ್ನೂ ಕವಚಾದಿಗಳನ್ನೂ ತಂದನು. ಅವರೆಲ್ಲರೂ ಕಾಡಿಗೆ ಹೊರಡಲು ಸಿದ್ಧರಾಗಿ ಮಹಾರಾಜನಿಂದ ಅಪ್ಪಣೆ ಪಡೆಯಲು ಕೈಕೆಯ ಅರಮನೆಗೆ ಬಂದರು.

ಅರಮನೆಯ ಬಾಗಿಲಲ್ಲಿ ಮಂತ್ರಿಯಾದ ಸುಮಂತ್ರನಿದ್ದನು. ಅವನು ಒಳಗೆ ಹೋಗಿ, ದಶರಥನೊಡನೆ ರಾಮನು ಬಂದನೆಂದು ತಿಳಿಸಿದನು. ದಶರಥನು ತನ್ನ ರಾಣಿಯರನ್ನೆಲ್ಲ ಅಲ್ಲಿಗೆ ಕರೆಯಿಸಿಕೊಂಡು ರಾಮನನ್ನು ಇದಿರುಗೊಳ್ಳಲು ಮುಂದೆ ಬಂದನು. ಆದರೆ ರಾಮ ಸೀತೆ ಲಕ್ಷ್ಮಣರನ್ನು ಕಂಡೊಡನೆ ಅವನು ದುಃಖಾತಿರೇಕದಿಂದ ಕೆಳಗೆ ಬಿದ್ದನು. ರಾಮಲಕ್ಷ್ಮಣರು ಓಡಿಹೋಗಿ ಅವನನ್ನು ಉಪಚರಿಸಿದರು. ಇದರಿಂದಾಗಿ ದಶರಥನಿಗೆ ಎಚ್ಚರವಾಯಿತು.

"ಮಗೂ ರಾಮಚಂದ್ರ! ನನ್ನವಳೆಂಬ ಪ್ರೀತಿಯಿಂದ ಕೊಟ್ಟ ವರವೀಗ ನಿನಗಿಂತಹ ಕಷ್ಟತಂದಿತು. ಮಗೂ ನಿನಗೆ ನಾನು ತಂದೆಯ ಬದಲು ವೈರಿಯಾದೆನಲ್ಲಾ" ಎಂದು ದಶರಥನು ಹಲುಬಿದನು.

"ಅಪ್ಪಾ! ಹಾಗೆನ್ನಬೇಡಿ. ನನ್ನಿಂದ ನೀವು ಅಸತ್ಯವಂತರಾಗಬಾರದು.

ಹದಿನಾಲ್ಕು ವರ್ಷ ವನವಾಸಮಾಡಿ ಕೂಡಲೇ ಅಯೋಧ್ಯೆಗೆ ಬರುವೆನು" ಎಂದು ಶ್ರೀರಾಮನು ಸಂತೈಸಿದನು.

ದಶರಥನು ಮೊದಲು ರಾಮನಿಗೆ ಹೋಗೆಂದನು. ಅನಂತರ ಬೇಡ ವೆಂದನು. ಕೊನೆಗೆ ಸುಮಂತ್ರನೊಡನೆ ರಾಮನ ವನವಾಸಕ್ಕೆ ಬೇಕಾದ ವಸ್ತುಒಡವೆಗಳನ್ನೂ ಆನೆಸೇನೆಗಳನ್ನೂ ಒದಗಿಸಬೇಕೆಂದನು. ಈ ಮಾತು ಗಳನ್ನು ಕೇಳಿ ಅಲ್ಲಿದ್ದ ರಾಣಿಯರು ಅತಿಯಾಗಿ ದುಃಖಿಸಿದರು. ಆಗ ಕೈಕೆಯು ದಿಟ್ಟತನದಿಂದ ದಶರಥನನ್ನು ಭಂಗಿಸಿ ಮಾತನಾಡಿದಳು. ಆಗ ರಾಮನು ತಂದೆಯನ್ನೂ ಚಿಕ್ಕತಾಯಿಯನ್ನೂ ಸಂತೈಸಿದನು.

"ಕಾಡಿಗೆ ಹೊರಟು ನಿಂತಿರುವ ನಮಗೆ ಇದಾವುದೂ ಬೇಡ. ನಮಗೆ ಬೇಕಾದುದೆಂದರೆ ವಲ್ಕಲ." ಈ ಮಾತನ್ನು ಕೇಳಿದೊಡನೆ ಕೈಕೆಯು ವಲ್ಕಲಗಳನ್ನು ತರಿಸಿಕೊಟ್ಟಳು. ರಾಮಲಕ್ಷ್ಮಣರು ಅವುಗಳನ್ನು ಉಟ್ಟು ಕೊಂಡರು. ಸೀತೆಗೆ ಮಾತ್ರ ಅದನ್ನುಡಲು ತಿಳಿಯಲಿಲ್ಲ. ಆಗ ರಾಮನೇ ಆಕೆಗೆ ಅದನ್ನುಡಲು ಕಲಿಸಿದನು. ಇದನ್ನು ಕಂಡು ಹೆಂಗಸರ ದುಃಖ ಇಮ್ಮಡಿಸಿತು. ಸೀತೆಯ ದೀನವೇಷವನ್ನು ಕಂಡು ವಸಿಷ್ಠನೂ ಸಹಿಸದಾ ದನು. ದಶರಥನು ಕೊಟ್ಟ ವರಗಳಂತೆ ರಾಮನು ಕಾಡಿಗೆ ಹೋದರೂ ಸೀತೆಯು ಅವನ ಪರವಾಗಿ ಆಳುತ್ತಿರುವುದೇ ನ್ಯಾಯಸಮ್ಮತವೆಂದು ಅವನು ಹೇಳಿ, ಕೈಕೆಯನ್ನು ಎಚ್ಚರಿಸಿದನು.

ಆದರೆ ಎಲ್ಲವೂ ಗೋರ್ಕಲ್ಲ ಮೇಲೆ ಮಳೆಸುರಿದಂತಾಯಿತು. ಕೈಕೆ ತನ್ನ ಛಲವನ್ನು ಬಿಡಲೇ ಇಲ್ಲ.

ಹೊರಡಲು ಸಿದ್ಧನಾದ ಶ್ರೀರಾಮನು ಮೊದಲು ತಂದೆಗೆ ನಮಸ್ಕರಿ ಸಿದನು. ಅನಂತರ ತಾಯಿಗೆ ಅಡ್ಡಬಿದ್ದನು. ಆ ಮೇಲೆ ಇತರ ರಾಣಿ ಯರಿಗೂ ವಂದಿಸಿದನು. ಅವನನ್ನು ಅನುಸರಿಸಿ ಸೀತೆ ಲಕ್ಷ್ಮಣರೂ ನಮ ಸ್ಕರಿಸುತ್ತ ಬಂದರು. ಸೀತೆಯು ಕೌಸಲ್ಯೆಗೆ ನಮಸ್ಕರಿಸಿದಾಗ ಆಕೆ ಅವ ಳಿಗೆ ಬುದ್ಧಿಹೇಳಿದಳು. "ಗಂಡನ ಕಷ್ಟಸುಖಗಳಲ್ಲಿ ಅವನ ನೆರಳಿನಂತಿರು" ಎಂದಳು. ಲಕ್ಷ್ಮಣನು ಸುಮಿತ್ರೆಗೆ ಅಡ್ಡಬಿದ್ದಾಗ ಆಕೆ ಅವನನ್ನು ಹರಸಿ ದಳು. "ಮಗೂ! ಅಣ್ಣನನ್ನು ತಂದೆಯಂತೆ ಭಾವಿಸಿಕೋ. ಸೀತೆಯೇ

ನಾನೆಂದು ತಿಳಿ. ಅವರಿಬ್ಬರ ಸೇವೆಯನ್ನೂ ಭಕ್ತಿಯಿಂದ ಮಾಡು. ನಿನಗೆ ಅರಣ್ಯವು ಅಯೋಧ್ಯೆಯೇ ಆಗಲಿ". ಅಷ್ಟರಲ್ಲಿ ಸುಮಂತ್ರನು ರಥವನ್ನು ತಂದು ಹೊರಗೆ ನಿಲ್ಲಿಸಿ ಒಳಗೆ ಬಂದನು. ರಾಮಾದಿಗಳು ಎಲ್ಲರನ್ನೂ ಬೀಳ್ಕೊಂಡು ಹೊರಬಂದರು. ಪಟ್ಟಾಭಿಷೇಕದಿಂದ ಆನಂದವು ತುಂಬ ಬೇಕಾದ ಮನೆಯಲ್ಲಿ ದುಃಖವು ತುಂಬಿತು. ಅದು ಸಾವಿನ ಮನೆಯಂ ತಾಯಿತು. ರಾಮನು ಕಾಡಿಗೆ ಹೋಗುವ ವಾರ್ತೆಯನ್ನು ಕೇಳಿ ಅಯೋ ಧ್ಯೆಯೇ ಅವನನ್ನು ಹಿಂಬಾಲಿಸಿತು. ಪುರಜನರು ರಾಮ ಸೀತೆ ಲಕ್ಷ್ಮಣರ ಗುಣಗಳನ್ನು ಹೊಗಳುತ್ತ ರಥದ ಹಿಂದೆ ಗುಂಪುಗುಂಪಾಗಿ ನಡೆದರು.

ಅರಮನೆಯ ಹೊರಗೆ ಬಂದಿದ್ದ ದಶರಥನು ಶ್ರೀರಾಮನೇರಿದ ರಥವೂ ಅನಂತರ ಅದರ ಧೂಳೂ ಕಾಣುವ ವರೆಗೆ ಅಲ್ಲಿಯೇ ನಿಂತಿದ್ದು ಆ ಕಡೆಗೇ ನೋಡುತಿದ್ದನು. ಅದು ಕಣ್ಮರೆಯಾದೊಡನೆ ಅವನು ಮೂರ್ಛಿತನಾದನು. ಹತ್ತಿರವೇ ಇದ್ದ ಕೌಸಲ್ಯೆ ರಾಜನನ್ನು ಉಪಚರಿಸಿದಳು. ಎಚ್ಚರಗೊಂಡಾಗ ಅವನ ತೋಳನ್ನು ಹಿಡಿದು ಅರಮನೆಯ ಒಳಗೆ ಕರೆದುಕೊಂಡು ಹೋದಳು. ಆಗ ಕೈಕೆಯೂ ಅಲ್ಲಿಗೆ ಬಂದಳು. ತನ್ನ ಬಳಿಗೆ ಬರುವ ಕೈಕೆಯನ್ನು ನೋಡಿದ ರಾಜನು ಕೋಪಗೊಂಡನು. ಅವಳನ್ನು ತನ್ನ ಪತ್ನಿಯಲ್ಲವೆಂದು ಜರೆದನು. "ಹಿರಿಯನಿಗೆ ಸಲ್ಲಬೇಕಾದ ಈ ರಾಜ್ಯವನ್ನು ಭರತನು ಒಪ್ಪಿ ಕೊಂಡರೆ ಅವನೂ ನನ್ನ ಮಗನಲ್ಲ" ಎಂದು ಕಠಿಣ ಮಾತು ಹೇಳಿದನು. ಕೌಸಲ್ಯೆಯನ್ನಾದರಿಸಿ ತನ್ನ ಅಂತಃಪುರಕ್ಕೆ ಬಂದು ಹಾಸಿಗೆಯಲ್ಲಿ ಹುಚ್ಚನಂತೆ ಹೊರಳಾಡಿದನು; ಗೋಳಾಡಿದನು. ಕೌಸಲ್ಯೆಯೂ ಅವನ ಬಳಿ ಕುಳಿತು ದುಃಖಿಸಿದಳು. ಆಗ ಸುಮಿತ್ರೆಯು ಅವರಿಬ್ಬರನ್ನೂ ಸಂತೈಸಿದಳು. "ಶ್ರೀ ರಾಮಚಂದ್ರನಿಗೆ ಎಲ್ಲಿದ್ದರೂ ಭಯವಿಲ್ಲ. ತಂದೆಯ ಮಾತಿಗಾಗಿ ಅವನು ಕಾಡಿಗೆ ಹೋಗಿರುವನು. ಆತನಿಗೆ ಸಂತೋಷಕೊಡಲು ಜಾನಕಿ ಇದ್ದಾಳೆ. ಸೇವೆಮಾಡಲು ಲಕ್ಷ್ಮಣನಿದ್ದಾನೆ".

ಆ ಮಾತು ಕೇಳಿ ಕೌಸಲ್ಯೆಗೆ ಒಂದಿಷ್ಟು ಸಮಾಧಾನವಾಯಿತು.

ತನ್ನನ್ನು ಹಿಂಬಾಲಿಸುತಿದ್ದ ಪುರಜನರನ್ನು ಹಿಂತೆರಳಲು ರಾಮನು ಹಲವು ಸಲ ಪ್ರಾರ್ಥಿಸಿದನು. ಆದರೆ ಅವರೆಲ್ಲರೂ ಅವನನ್ನು ಅನುಸರಿ

ಸಿದರು. ಸಂಜೆಯ ಹೊತ್ತಿಗೆ ರಾಮನ ರಥವು ತಮಸಾ ನದಿಯ ತೀರವನ್ನು ಸೇರಿತು. ಅವರು ಆ ರಾತ್ರಿ ಅಲ್ಲಿಯೇ ತಂಗಿದರು. ಅದು ವನವಾಸದ ಪ್ರಥಮ ರಾತ್ರಿ. ಶ್ರೀರಾಮನು ಒಂದಿಷ್ಟು ನೀರುಕುಡಿದೇ ತೃಪ್ತನಾದನು. ಒಂದು ಮರದ ಕೆಳಗೆ ಅವರೆಲ್ಲ ಮಲಗಿದರು. ಶ್ರೀರಾಮನಿಗೆ ನಿದ್ರೆಯೇ ಬರಲಿಲ್ಲ. ಅವನ ಮನಸ್ಸು ಅಯೋಧ್ಯೆಯ ಕಡೆಗೆ ಹರಿಯಿತು. ತಂದೆತಾಯಿಗಳು ಎಂತಿರಬಹುದೆಂದು ಅವನು ಚಿಂತಿಸಿದನು. ಸಮೀಪದಲ್ಲೇ ಇದ್ದ ಲಕ್ಷ್ಮಣ ಸುಮಂತ್ರರೂ ನಿದ್ರೆಮಾಡದೆ ರಾಮನ ಗುಣಕಥನ ಮಾಡುತ್ತ ಕುಳಿತರು. ಪುರಜನರೆಲ್ಲ ಅಲ್ಲಲ್ಲಿ ಮರಗಳ ಕೆಳಗೆ ಮಲಗಿ ನಿದ್ರಿಸಿದ್ದರು. ಮುಂಜಾನೆಗೆ ಮೊದಲೇ ಶ್ರೀರಾಮನೆದ್ದು ನಿತ್ಯವಿಧಿಗಳನ್ನು ತೀರಿಸಿದನು. ಸೀತಾದೇವಿಯನ್ನೂ ಎಬ್ಬಿಸಿದನು. ಸುಮಂತ್ರ ಲಕ್ಷ್ಮಣರನ್ನು ಕರೆದು ಅಲ್ಲಿ ಮಲಗಿದ್ದ ಪೌರರು ಏಳುವ ಮೊದಲೇ ತಾವು ಅಲ್ಲಿಂದ ತೆರಳಬೇಕೆಂದನು. ತಮ್ಮ ಸುಳಿವನ್ನು ಕಾಣದೆ ಪ್ರಜೆಗಳು ಹಿಂತಿರುಗುವರೆಂದು ಆಲೋಚಿಸಿದನು.

ಶ್ರೀರಾಮನು ಹೇಳಿದಂತೆ ಅವರೆಲ್ಲರೂ ರಥವನ್ನೇರಿದರು. ತಮಸಾ ನದಿಯನ್ನು ದಾಟಿದ ಬಳಿಕ ಆಚೆಯ ದಡದಲ್ಲಿ ಅವರೆಲ್ಲರೂ ರಥದಿಂದ ಇಳಿದರು. ಆ ರಥವು ಅಯೋಧ್ಯೆಗೆ ಹೋಗುವ ದಾರಿಯಲ್ಲೇ ಸ್ವಲ್ಪ ದೂರ ಹೋಗಿ ಮರಳಿ ಅವರೆಡೆಗೇ ಬಂತು. ಅದನ್ನೇರಿ ಅವರೆಲ್ಲರೂ ತಪೋವನದ ಕಡೆಗೆ ನಡೆದರು. ಪುರಜನರು ಒಬ್ಬೊಬ್ಬರೇ ಎದ್ದು ರಾಮನೆಲ್ಲಿ? ಲಕ್ಷ್ಮಣನೆಲ್ಲಿ? ಸೀತೆಯೆಲ್ಲಿ? ಎಂದು ಹುಡುಕಿದರು. ರಥವು ಪುರದ ಕಡೆಗೆ ಹೋದ ಸುಳಿವು ಹಿಡಿದು ನಡೆದರು. ಆದರೆ ಅವರಿಗೆ ಸೀತಾರಾಮಲಕ್ಷ್ಮಣರು ಹೋದ ದಾರಿಯೇ ಸಿಗಲಿಲ್ಲ. ಎಲ್ಲರೂ ನಿರಾಶರಾಗಿ ದುಃಖದಿಂದ ಮನೆ ಸೇರಿದರು.

ಪುರಜನರಿಂದ ತಪ್ಪಿಸಿಕೊಂಡು ಮುಂದೆ ಹೋದ ರಾಮಲಕ್ಷ್ಮಣರು ಚೆನ್ನಾಗಿ ಬೆಳಗಾಗುವ ವೇಳೆಗೆ ಕೋಸಲದೇಶದ ಎಲ್ಲೆಯನ್ನು ದಾಟಿದರು. ಆಗ ಶ್ರೀರಾಮನು ರಥದಿಂದ ಇಳಿದು ಅಯೋಧ್ಯೆಗೆ ಮುಖಮಾಡಿ ನಿಂತು, ಆ ಪುರಕ್ಕೆ ವಂದಿಸಿದನು. ತಂದೆಯ ಮಾತನ್ನು ಪಾಲಿಸಿ ಹದಿನಾಲ್ಕು

ವರ್ಷ ಕಳೆದೊಡನೆ ಪುನಃ ಬಂದು ಆ ಪುರಪ್ರವೇಶ ಮಾಡುವೆನೆಂದನು. ಅಲ್ಲೇ ಸಮೀಪದಲ್ಲಿ ಪಾವನವಾದ ಗಂಗಾನದಿಯು ಹರಿಯುತ್ತಿತ್ತು. ಅದನ್ನು ಕಂಡು ಶ್ರೀರಾಮನು ಉತ್ಸಾಹಗೊಂಡನು. ಆ ದಿನ ಅಲ್ಲಿಯೇ ಇರಬೇಕೆಂದು ಬಗೆದು ಅವರು ಒಂದು ಮರದ ಕೆಳಗೆ ವಿಶ್ರಾಂತಿಗೊಂಡರು. ಗಂಗಾನದಿಯ ತೀರದಲ್ಲಿದ್ದ ಆ ಕಾಡಿಗೆ ಗುಹನೆಂಬ ಬೇಡನು ರಾಜನಾಗಿದ್ದನು. ಅವನು ಶ್ರೀರಾಮನು ಬಂದಿರುವ ಸಂಗತಿಯನ್ನು ತಿಳಿದು ಅಲ್ಲಿಗೆ ಓಡಿಬಂದನು. ಬರುವಾಗ ತನ್ನ ಮಂತ್ರಿಯೇ ಮೊದಲಾದವರೊಂದಿಗೆ ಆಹಾರವನ್ನೂ ತಂದನು. ಶ್ರೀರಾಮನ ಮುನಿವೇಷವನ್ನು ಕಂಡು ಅವನು ಬೇಸರಪಟ್ಟನು. ಆಗ ರಾಮನು, ತಂದೆಯ ಮಾತಿಗಾಗಿ ತಾನು ಕಾಡಿಗೆ ಬಂದುದನ್ನೂ ವನದ ಹಣ್ಣುಹಂಪಲುಗಳೂ ಬೇರುಗಡ್ಡೆಗಳೂ ಅವರ ಆಹಾರವೆಂಬುದನ್ನೂ ತಿಳಿಸಿದನು. ಅವರು ಆ ರಾತ್ರಿಯನ್ನು ಅಲ್ಲೇ ಕಳೆದರು. ಗುಹನೂ ಅವರ ಬಳಿ ನಿಂತನು. ಸೀತಾರಾಮರು ಮಲಗಿದ ಮೇಲೆ ಗುಹನೂ ಲಕ್ಷ್ಮಣನೂ ರಾಮನ ವಿಚಾರವಾಗಿ ಮಾತನಾಡುತ್ತ ಕುಳಿತರು. ಲಕ್ಷ್ಮಣನು ನಿದ್ರಿಸಬಹುದೆಂದು ಹೇಳಿದರೂ ಲಕ್ಷ್ಮಣನು ಮಲಗಲಿಲ್ಲ. ಅಣ್ಣನೂ ಅತ್ತಿಗೆಯೂ ಈ ಎಲೆಯ ಮೇಲೆ ಮಲಗಿರುವಾಗ ತಾನು ಮಲಗಲಾರೆನೆಂದನು.

ಮರುದಿನ ಬೆಳಗಾಯಿತು. ಸೂರ್ಯನು ಹೊಂಬಣ್ಣದ ಕಿರಣಗಳನ್ನು ಹರಿಯುವ ನೀರಿನ ಮೇಲೂ ರಾಶಿಬಿದ್ದ ಹೊಯಿಗೆಯ ಮೇಲೂ ಬೀರಿದನು. ಎಲ್ಲರೂ ಬೇಗಬೇಗನೆ ಎದ್ದರು. ಶ್ರೀರಾಮನು ಸುಮಂತ್ರನನ್ನು ಅಯೋಧ್ಯೆಗೆ ಹಿಂತಿರುಗಲು ಹೇಳಿದನು. ಸೀತಾರಾಮಲಕ್ಷ್ಮಣರು ಗುಹನ ದೋಣಿಯಲ್ಲಿ ಕುಳಿತು ಗಂಗಾನದಿಯನ್ನು ದಾಟಿದರು. ನದಿಯನ್ನು ದಾಟುತ್ತಿರುವಾಗ ಸೀತೆಯು ಗಂಗಾಮಾತೆಯ ಪ್ರಾರ್ಥನೆಮಾಡಿದಳು. "ವನವಾಸವನ್ನು ಮುಗಿಸಿ ಕ್ಷೇಮದಿಂದ ರಾಜ್ಯಸೇರಿದ ಮೇಲೆ, ಅಮ್ಮಾ, ನಿನ್ನ ಪ್ರೀತಿಗಾಗಿ ದಾನಧರ್ಮಾದಿಗಳನ್ನು ಮಾಡಿಸುತ್ತೇನೆ. ನಿನಗೂ ಎಡೆಯಿತ್ತು ಪೂಜಿಸುತ್ತೇನೆ" ಎಂದಳು.

ಆಚೆ ದಡ ಸೇರಿದ ಮೇಲೆ ಅವರು ಗುಹನನ್ನು ಬೀಳ್ಕೊಟ್ಟು ಕಾಲುನಡೆಯಿಂದ ಮುಂದೆಹೋದರು. ಈಚೆ ದಡದಲ್ಲಿ ನಿಂತು ಅವರನ್ನೇ ನೋಡು

ತಿದ್ದ ಸುಮಂತ್ರನು ಅವರು ಕಣ್ಮರೆಯಾದ ಮೇಲೆ ಅತಿಯಾದ ದುಃಖದಿಂದ ರಥವನ್ನೇರಿ ಅಯೋಧ್ಯೆಗೆ ಬಂದನು.

ಗಂಗಾನದಿಯನ್ನು ದಾಟಿದ ಸೀತಾರಾಮಲಕ್ಷ್ಮಣರು ಮುಂದೆ ಕಾಡಿನ ದಾರಿ ಹಿಡಿದರು. ಮಾರ್ಗವನ್ನು ಹುಡುಕುತ್ತ ಲಕ್ಷ್ಮಣನು ಮುಂದೆ ನಡೆದನು. ಅವನ ಹಿಂದಿನಿಂದ ಸೀತೆಯು ನಡೆದಳು. ಅವರಿಬ್ಬರ ರಕ್ಷಣೆಯನ್ನು ಮಾಡುತ್ತ ರಾಮನು ಅವರ ಹಿಂದೆ ನಡೆದನು. ಮಧ್ಯಾಹ್ನದ ವೇಳೆಗೆ ಹಸಿವೆ ಬಾಯಾರಿಕೆಗಳನ್ನು ಪರಿಹರಿಸಿ ವಿಶ್ರಾಂತಿ ಪಡೆದು ಮತ್ತೆ ಮುನ್ನಡೆದರು. ಅಂದು ರಾತ್ರಿಯನ್ನವರು ಒಂದು ಆಲದಮರದ ಬುಡದಲ್ಲಿ ಕಳೆದರು. ಆ ರಾತ್ರಿ ರಾಮಲಕ್ಷ್ಮಣರು ಎಚ್ಚರದಿಂದಿದ್ದರು. ರಾಮನು ಅಯೋಧ್ಯೆಯಲ್ಲಿ ದಶರಥನೇ ಮೊದಲಾದವರು ಹೇಗಿರುವರೋ ಎಂದು ಯೋಚಿಸಿದನು. ತಾಯಿಗೆ ಇನ್ನೆಷ್ಟು ವಿಪತ್ತುಗಳು ಉಂಟಾಗುವವೋ ಎಂದು ಭಾವಿಸಿದನು. ಅಷ್ಟು ಹೊತ್ತಿಗೆ ಬೆಳಗಾಯಿತು. ಅವರು ಬೇಗನೆ ಎದ್ದು ನಿತ್ಯವಿಧಿಗಳನ್ನು ತೀರಿಸಿ ಆ ದಿನದ ಪ್ರಯಾಣಕ್ಕೆ ತೊಡಗಿದರು.

ಮಧ್ಯಾಹ್ನದ ಹೊತ್ತಿಗೆ ಅವರು ಗಂಗಾಯಮುನಾ ನದಿಗಳ ಸಂಗಮ ಸ್ಥಾನಕ್ಕೆ ಬಂದರು. ಅಲ್ಲಿಯೇ ಭರದ್ವಾಜ ಆಶ್ರಮವಿತ್ತು. ಅವರು ಆ ಆಶ್ರಮಕ್ಕೆ ಹೋಗಿ ಅಲ್ಲಿನ ಮಹರ್ಷಿಗೆ ವಂದಿಸಿದರು. ಶ್ರೀರಾಮನು ಅವರ ಸಮಾಚಾರವನ್ನು ಋಷಿಗೆ ತಿಳಿಸಿದನು. ಆಗ ಭರದ್ವಾಜ ಋಷಿಯು, ಅವರು ತಮ್ಮ ವನವಾಸವನ್ನು ಆ ಕಾಡಿನಲ್ಲೇ ಇದ್ದು ಕಳೆಯಬಹುದೆಂದು ಸೂಚಿಸಿದನು. ಆದರೆ ರಾಮನು ತಾನು ಅಲ್ಲಿರುವುದು ಒಳಿತಲ್ಲವೆಂದು ಬಗೆದನು. ಅದು ಅಯೋಧ್ಯೆಗೆ ಸಮೀಪವಿರುವುದರಿಂದ ಪ್ರಜೆಗಳು ಆಗಾಗ್ಗೆ ಬಂದರೆ ತೊಂದರೆಯಾದೀತೆಂದು ತಿಳಿಸಿದನು. ಹಾಗಾಗಿ ಅವರು ಬೇರೆ ಕಡೆಗೆ ಹೋಗುವುದೆಂದಾಯಿತು. ಅವರ ವಾಸಕ್ಕೆ ಚಿತ್ರಕೂಟವೇ ಯೋಗ್ಯವೆಂದು ಆ ಋಷಿಯು ಸೂಚಿಸಿದನು. ಋಷಿಯ ಕೇಳಿಕೆಯಂತೆ ಸೀತಾರಾಮಲಕ್ಷ್ಮಣರು ಆ ರಾತ್ರಿ ಭರದ್ವಾಜ ಆಶ್ರಮದಲ್ಲಿದ್ದು ಮರುದಿನ ಚಿತ್ರಕೂಟಕ್ಕೆ ಬಂದರು. ಚಿತ್ರಕೂಟ ಪರ್ವತದಲ್ಲಿ ನೂರಾರು ಋಷಿಗಳ ಆಶ್ರಮಗಳಿದ್ದುವು. ರಾಮಲಕ್ಷ್ಮಣರು ಅಲ್ಲಿಯೇ ಒಂದು ಪರ್ಣಶಾಲೆಯನ್ನು ನಿರ್ಮಿಸಿಕೊಂಡರು. ಅವರ ಪರ್ಣ

ಶಾಲೆಯ ಸಮೀಪದಲ್ಲೇ ಮಾಲ್ಯವತೀ ನದಿಯು ಹರಿಯುತ್ತಿತ್ತು. ಕಾಡುಗಿಡಗಳ ಹೊಸ ಹೂಬಳ್ಳಿಗಳಿಂದ ಆ ವನವು ಚೆಲುವಿನ ಬೀಡಾಗಿತ್ತು. ವನಶೋಭೆಯ ಆ ವಾತಾವರಣದಲ್ಲಿ ಸೀತಾರಾಮಲಕ್ಷ್ಮಣರು ಉತ್ಸಾಹದಿಂದಿದ್ದರು.

ಶ್ರೀರಾಮನು ಸೀತಾಲಕ್ಷ್ಮಣರೊಡನೆ ಕಾಡಿನಲ್ಲಿ ಕಣ್ಮರೆಯಾದ ಮೇಲೆ ಸುಮಂತ್ರನು ಕಣ್ಣೀರು ಸುರಿಸುತ್ತ ಅಯೋಧ್ಯೆಗೆ ಮರಳಿದನು. ಕೇಳಿದ ಪ್ರಜೆಗಳಿಗೆ ತಾನು ತಂದ ದುಃಖವಾರ್ತೆಯನ್ನು ತಿಳಿಸುತ್ತ ಅರಮನೆ ಸೇರಿದನು. ಅವನನ್ನು ಕಾಣುತ್ತಲೆ ದಶರಥನು ದುಃಖಾತಿರೇಕದಿಂದ ಕುಸಿದು ಬಿದ್ದನು. ರಾಣಿಯರೆಲ್ಲರೂ ಗೋಳೋ ಎಂದು ಅತ್ತರು. ಕಣ್ಣೀರಿಡುತ್ತ ದಶರಥನು ಸೀತಾರಾಮ ಲಕ್ಷ್ಮಣರ ಕ್ಷೇಮವನ್ನು ವಿಚಾರಿಸಿದನು. ಸುಮಂತ್ರನು ಅವರ ಸಂದೇಶವನ್ನು ಇವರಿಗೆ ತಿಳಿಸಿದನು. ಸುಮಂತ್ರನ ಮಾತು ಕೇಳಿ ದಶರಥನ ದುಃಖವು ನೂರುಪಾಲು ಹೆಚ್ಚಾಯಿತು. ಕೈಕೇಗಾಗಿ ತಾನು ಮಾಡಬಾರದುದನ್ನು ಮಾಡಿದೆನಲ್ಲಾ ಎಂದು ತನ್ನನ್ನು ತಾನೇ ಹಳಿದುಕೊಂಡನು. ಅವನ ಬಳಿಯಲ್ಲೇ ಇದ್ದ ಕೌಸಲ್ಯೆಯೂ ತನ್ನ ಪುತ್ರನ ಬನ್ನಕ್ಕಾಗಿ ದಶರಥನನ್ನೇ ಚುಚ್ಚಿ ಮಾತನಾಡಿದಳು. ಇದರಿಂದಾಗಿ ಅವನ ದುಃಖವು ಇನ್ನೂ ಹೆಚ್ಚಾಯಿತು. ಆಗ ಅವನು ತನಗಿದು ಅಂತಿಮಕಾಲವೆಂದು ತಿಳಿದನು. ಅದರೊಂದಿಗೆ ಯೌವನದಲ್ಲಿದ್ದಾಗ ದಶರಥನಿಗೆ ಪ್ರಾಪ್ತವಾದ ಮುನಿಶಾಪವನ್ನೂ ನೆನೆದುಕೊಂಡನು. ಯುವರಾಜನಾಗಿದ್ದ ತಾನು ಮೃಗಬೇಟೆಗೆ ಹೋದುದು, ಮೃಗವೆಂದು ಭಾವಿಸಿ ಮುನಿಕುಮಾರಗೆ ಬಾಣಪ್ರಯೋಗಿಸಿದುದು, ಅದರಿಂದಾಗಿ ಮುನಿಶಾಪ ಪ್ರಾಪ್ತವಾದುದು, ಈಗ ಅದು ಸತ್ಯವಾಗುತ್ತಿರುವುದು– ಇವುಗಳನ್ನೆಲ್ಲ ಕೌಸಲ್ಯಾದೇವಿಗೆ ತಿಳಿಸಿದನು. ಇದನ್ನು ಕೇಳಿ ಕೌಸಲ್ಯೆ ಹೆದರಿದಳು. ಆಗ ದಶರಥನು ಮೆಲ್ಲಗೆ ಮಾತನಾಡಿದನು.

"ಮಂಗಳಾಂಗಿ! ನಾನಿನ್ನು ಹೆಚ್ಚು ಕಾಲ ಬದುಕಲಾರೆ. ನನ್ನ ಕಣ್ಣು ಮಸುಕಾಗುತ್ತಿದೆ. ಶ್ರೀರಾಮನು ನನ್ನ ಹತ್ತಿರವಿಲ್ಲವಲ್ಲಾ! ಮಕ್ಕಳಾರೂ ನನ್ನ ಹತ್ತಿರವಿಲ್ಲವಲ್ಲಾ! ಅಯ್ಯೋ ಈ ಪುತ್ರಶೋಕವೇ! ಅಯ್ಯೋ! ಅಯ್ಯೋ! ರಾಮಾ! ರಾಮಾ!" ಎಂದು ದಶರಥನು ಹಂಬಲಿಸುತ್ತಿರುವಾಗಲೇ ಅವನ ಆತ್ಮವು ಆ ದೇಹದಿಂದ ಹಾರಿಹೋಯಿತು.

ಮಹುವಿನ ಬೆಳಗಾಯಿತು. ಅರಮನೆಯು ದುಃಖದ ನೆಲೆಮನೆಯಾಯಿತು. ದಶರಥಮಹಾರಾಜನು ಸ್ವರ್ಗಸ್ಥನಾದ ವಾರ್ತೆ ಎಲ್ಲೆಲ್ಲೂ ಹಬ್ಬಿತು. ಅಷ್ಟರಲ್ಲಿ ಮಂತ್ರಿಗಳು ವಸಿಷ್ಠರೊಂದಿಗೆ ಅರಮನೆಗೆ ಬಂದರು. ದಶರಥನ ಶವವನ್ನು ಎಣ್ಣೆಯ ದೋಣಿಯಲ್ಲಿರಿಸಿ, ಅಂತ್ಯಸಂಸ್ಕಾರಕ್ಕಾಗಿ ಭರತನು ಬರಬೇಕೆಂದು ನಿಶ್ಚಯಿಸಿದರು. ಭರತ ಶತ್ರುಘ್ನರಿಗೆ ಒಡನೆಯೇ ಹೊರಟುಬನ್ನಿರೆಂದು ವಸಿಷ್ಠರು ಪತ್ರಬರೆದು ದೂತರ ಕೈಗೆಕೊಟ್ಟು ಅವರನ್ನು ಕೇಕಯ ರಾಜಧಾನಿಗೆ ಕಳುಹಿಸಿದರು. ದೂತರು ಪಯಣದ ಮೇಲೆ ಪಯಣಮಾಡಿ ಕೇಕಯ ರಾಜಧಾನಿಯಾದ ಗಿರಿವ್ರಜವನ್ನು ಸೇರಿದರು. ಅವರು ಗಿರಿವ್ರಜವನ್ನು ಸೇರುವಾಗ ರಾತ್ರಿಯಾಗಿತ್ತು. ಆ ರಾತ್ರಿ ಭರತನಿಗೆ ಏನೇನೋ ದುಃಸ್ವಪ್ನಗಳಾದುವು. ಸ್ವಪ್ನಗಳ ನೆನಪಿನಿಂದಲೇ ಎದ್ದ ಅವನಿಗೆ ಬಹಳ ಬೇಸರವೆನಿಸಿತು. ಅಷ್ಟರಲ್ಲಿ ಅಯೋಧ್ಯೆಯಿಂದ ಬಂದಿದ್ದ ದೂತರು ಬಂದು ವಸಿಷ್ಠರಿತ್ತ ಪತ್ರವನ್ನು ಕೊಟ್ಟು, ಅವರು ಹೇಳಿಕಳುಹಿಸಿದ ಮಾತುಗಳನ್ನು ತಿಳಿಸಿದರು. ಕೂಡಲೆ ಭರತನು ಅಜ್ಜನಿಂದಲೂ ಸೋದರಮಾವನಿಂದಲೂ ಅಪ್ಪಣೆ ಪಡೆದು ತಮ್ಮನೊಂದಿಗೆ ಅಯೋಧ್ಯೆಗೆ ಹೊರಟನು. ಅಯೋಧ್ಯೆಯನ್ನು ಬೇಗ ಸೇರಬೇಕೆಂಬ ಆತುರವು ಭರತನಲ್ಲಿ ಹೆಚ್ಚಾಯಿತು. ಆಗ ಅವನು ಪರಿವಾರವನ್ನು ಹಿಂದೆಬಿಟ್ಟು ತಮ್ಮನೊಂದಿಗೆ ಹಗಲಿರುಳು ಪಯಣಮಾಡಿ ಅಯೋಧ್ಯೆಯನ್ನು ಸೇರಿದನು.

ಅಯೋಧ್ಯೆ! ಅವರು ಹುಟ್ಟಿಬೆಳೆದು ಆಡಿದ ಅವರ ಪ್ರೀತಿಯ ಅಯೋಧ್ಯೆ! ಅದನ್ನು ಕಂಡಾಗ ಭರತನಿಗೇಕೊ ಮಂಕುಕವಿದಂತೆ ಭಾಸವಾಯಿತು. ನಗರದೊಳಗೆ ಪ್ರವೇಶಮಾಡಿದಾಗ ಅದು ನಿರ್ಜನವಾದ ಸುಡುಗಾಡಿನಂತೆ ಕಂಡಿತು. ಅರಮನೆಯನ್ನು ಹೊಕ್ಕವನೆ ನೆಟ್ಟಗೆ ದಶರಥನ ಅಂತಃಪುರವನ್ನು ಸೇರಿದನು. ಅಲ್ಲಿ ದಶರಥ ಇರಲಿಲ್ಲ. ಅಲ್ಲಿ ಯಾರೂ ಇಲ್ಲದ್ದರಿಂದ ಅವನು ತಾಯಿಯ ಅಂತಃಪುರಕ್ಕೆ ಹೋದನು. ಮಗನು ಬಂದೊಡನೆ ಕೈಕೆ ಅವನನ್ನು ಅಪ್ಪಿ ಮುದ್ದಾಡಿ ತನ್ನ ತೌರುಮನೆಯವರ ಕ್ಷೇಮವನ್ನು ವಿಚಾರಿಸಿದಳು. ಆ ಮೇಲೆ ತಾನು ಭರತನಿಗಾಗಿ ರಾಜ್ಯ ಸಂಪಾದಿಸಿದುದನ್ನು ಆತನೂ ಮೆಚ್ಚುವನೆಂದು ಯೋಚಿಸುತ್ತ ಎಲ್ಲಾ ಸಂಗತಿಗಳನ್ನೂ ಹೇಳಿದಳು. ಅದನ್ನು ಕೇಳಿ ಭರತನು ಕುಸಿದುಬಿದ್ದು ಮೂರ್ಛೆಹೋದನು. ತನ್ನ ತಾಯಿ ರಾಜ್ಯಕ್ಕಾಗಿ

ಅಣ್ಣನನ್ನು ಕಾಡಿಗಟ್ಟಿ ತಂದೆಯ ಮರಣಕ್ಕೆ ಕಾರಣಳಾದಳೆಂದು ತೀರ ಅವನು ಸಂತಾಪಗೊಂಡನು. ಕೋಪಾತಿರೇಕದಿಂದ ತಾಯಿಯನ್ನು ಪಾಪಿಷ್ಠೆ ಯೆಂದು ಶಪಿಸಿದನು. ಆ ಮೇಲೆ ಸಹಿಸಲಾರದ ದುಃಖದಿಂದ ಕುಸಿದು ಕುಳಿ ತನು. ಅಷ್ಟರಲ್ಲಿ ಮಂತ್ರಿಗಳು ಬಂದರು. ಇತರ ರಾಣಿಯರೂ ಬಂದರು. ಭರತನು ತಾನು ನಿರ್ದೋಷಿಯೆಂದು ಅವರೊಡನೆ ಜೇಡಿಕೊಂಡನು. ಕೊನೆಗೆ ಕೌಸಲ್ಯೆಯು ಅವನನ್ನು ಸಂತೈಸಿದಳು. ವಸಿಷ್ಠರ ಸೂಚನೆಯಂತೆ ಮರುದಿನ ಭರತನು ತಂದೆಯ ಅಂತ್ಯಕ್ರಿಯೆಗಳನ್ನೆಲ್ಲ ಮಾಡಿದನು. ಶ್ರಾದ್ಧ ಕಾರ್ಯ ಗಳು ಮುಗಿದೊಡನೆ ಮಂತ್ರಿಗಳು ಭರತನಿಗೆ ಪಟ್ಟಗಟ್ಟುವುದೆಂದು ಯೋಚಿ ಸಿದರು. ಆದರೆ ಭರತನು ಅದಕ್ಕೊಪ್ಪಲಿಲ್ಲ. "ಶ್ರೀರಾಮನೇ ರಾಜನಾಗಲಿ! ಅವನ ಬದಲಿಗೆ ನಾನು ವನವಾಸಕ್ಕೆ ತೆರಳುವೆನು. ಚತುರಂಗಬಲದೊಡನೆ ಅವನಿದ್ದಲ್ಲಿಗೆ ಹೋಗಿ, ಅವನನ್ನೇ ಕರೆತರುವೆನು" ಎಂದನು. ಆಗ ಎಲ್ಲರೂ ಭರತನ ಮಾತಿಗೊಪ್ಪಿದರು.

ಮರುದಿನ ಭರತನೊಡನೆ ಮಂತ್ರಿಗಳೂ ಪುರೋಹಿತರೂ ಪರಿವಾರದ ವರೂ ರಾಣಿವಾಸದವರೂ ಪುರಜನರೂ ರಾಮನನ್ನು ಕರೆತರಲು ಹೊರಟರು. ಅಯೋಧ್ಯೆಯೇ ಕಾಡಿಗೆ ತೆರಳಿದಂತೆ ಆಯಿತು. ಭರತನು ತನ್ನ ಪರಿವಾರ ದೊಂದಿಗೆ ಗಂಗಾನದಿಯನ್ನು ಸೇರಿದೊಡನೆ ಅಲ್ಲಿ ತಂಗಿದನು. ಈ ವಾರ್ತೆ ಗುಹನಿಗೆ ಮುಟ್ಟಿತು. ಆತನು ಭರತನು ಬಂದುದರ ಗುಟ್ಟೇನೆಂದು ತಿಳಿಯ ದಾದನು. ಆದರೂ ಕಾಣಿಕೆಗಳೊಂದಿಗೆ ಬಂದು ಭರತನನ್ನು ಕಂಡನು. ಭರತನು ತನ್ನ ಆಶೆಯನ್ನು ಗುಹನಿಗೆ ತಿಳಿಸಿದನು. ರಾಮನಿರುವಲ್ಲಿಗೆ ಹೋಗಲು ತನಗೆ ಸಹಾಯಮಾಡಬೇಕೆಂದು ಕೇಳಿಕೊಂಡನು. ಭರತನಿಗೆ ಅಣ್ಣನ ಮೇಲಿದ್ದ ಭಕ್ತಿಯನ್ನು ಕಂಡು ಗುಹನಿಗೆ ಬಹಳ ಸಂತೋಷವಾ ಯಿತು. ಅವನು ತನ್ನವರಿಂದ ಭರತನ ಪರಿವಾರವು ಗಂಗಾನದಿಯನ್ನು ದಾಟುವಂತೆ ಮಾಡಿದನು. ಆ ಮೇಲೆ ಅವರಿಗೆ ಭರದ್ವಾಜ ಆಶ್ರಮದ ದಾರಿ ತೋರಿಸಿದನು. ಭರತನು ತನ್ನ ಪರಿವಾರವನ್ನು ದೂರದಲ್ಲೇ ನಿಲ್ಲಿಸಿ ತಾನು ಪುರೋಹಿತರನ್ನೂ ಮಂತ್ರಿಗಳನ್ನೂ ಕೂಡಿಕೊಂಡು ಆಶ್ರಮಕ್ಕೆ ಹೋದನು.

ಭರದ್ವಾಜರು ಅತಿಥಿಗಳನ್ನು ಸತ್ಕರಿಸಿದರು. ಭರದ್ವಾಜರೂ ಭರತಾಗ

ಮನಸಿನ ವಿಚಾರದಲ್ಲಿ ಸಂದೇಹ ತಾಳಿದರು. ಆ ಸಂದೇಹದಿಂದ ಅವರು ಕೇಳಿದ ಪ್ರಶ್ನೆಗಳಿಗೆ ಭರತನು ದುಃಖದಿಂದ ಉತ್ತರವಿತ್ತನು. ತಾನು ಶ್ರೀರಾಮನಿಗೆ ಎರಡೆಣಿಸಿ ಬಂದವನಲ್ಲವೆಂದೂ ಅವನನ್ನು ಅಯೋಧ್ಯೆಗೆ ಕರೆದೊಯ್ದು ಪಟ್ಟಾಭಿಷೇಕ ಮಾಡಿಸುವುದಕ್ಕಾಗಿ ಬಂದಿರುವೆನೆಂದೂ ತಿಳಿಸಿದನು. ಅದನ್ನು ಕೇಳಿ ಅವರಿಗೆ ಆನಂದವಾಯಿತು. ಅವರು ಭರತನ ಸೋದರಪ್ರೇಮವನ್ನು ಮೆಚ್ಚಿ ಹೊಗಳಿದರು. ಶ್ರೀರಾಮನು ಚಿತ್ರಕೂಟದಲ್ಲಿರುವುದನ್ನು ತಿಳಿಸಿದರು. ಆ ಮೇಲೆ ಅವರ ಆಮಂತ್ರಣದಂತೆ ಭರತನು ತನ್ನ ಅಸಂಖ್ಯಾತ ಸೇನೆಯೊಡನೆ ಭರದ್ವಾಜರ ಅತಿಥಿಸತ್ಕಾರವನ್ನು ಸ್ವೀಕರಿಸಿದನು. ಮರುದಿನ ಬೆಳಗ್ಗೆ ಭರತನು ಋಷಿಗಳ ಅನುಮತಿಯನ್ನು ಪಡೆದು ದಕ್ಷಿಣ ದಿಕ್ಕಿಗೆ ಪಯಣ ಬೆಳೆಸಿದನು.

ಶ್ರೀರಾಮನು ಸೀತಾಲಕ್ಷ್ಮಣರೊಂದಿಗೆ ಚಿತ್ರಕೂಟದ ಪರ್ಣಶಾಲೆಯಲ್ಲಿ ನೆಲಸಿ ಒಂದು ತಿಂಗಳಾಗುತ್ತ ಬಂದಿತ್ತು. ಆ ಒಂದು ತಿಂಗಳಕಾಲ ಅವರು ಅಲ್ಲಿನ ವನಶೋಭೆಯನ್ನು ನೋಡಿ, ಸಂತೋಷದಿಂದಿದ್ದರು. ಒಂದು ದಿನ ಸೀತಾರಾಮರು ಪರ್ಣಶಾಲೆಯ ಹೊರಗಡೆ ಒಂದು ಶಿಲೆಯ ಮೇಲೆ ಕುಳಿತು ಆಗ ತಾನೆ ಲಕ್ಷ್ಮಣನು ತಂದಿತ್ತ ಹಣ್ಣುಹಂಪಲುಗಳನ್ನು ತಿನ್ನುತಿದ್ದರು. ಆಗ ವನದಲ್ಲಿ ಜನಕೋಲಾಹಲವು ಕೇಳಿದಂತಾಯಿತು. ರಾಮನು ಲಕ್ಷ್ಮಣನನ್ನು ಕರೆದು ಅದೇನೆಂದು ನೋಡಿಬರಲು ಹೇಳಿದನು. ಲಕ್ಷ್ಮಣನು ದೊಡ್ಡ ಮರವನ್ನೇರಿ ನೋಡಿದನು. ಮಹಾಸೇನೆಯೊಂದಿಗೆ ಭರತನು ಬರುತ್ತಿರುವುದು ಗೋಚರವಾಯಿತು. ಲಕ್ಷ್ಮಣನಾಗಲೇ ಕೋಪಗೊಂಡನು. "ಅಣ್ಣಾ, ಕೈಕೆಯ ಮಗನು ನಮ್ಮೊಡನೆ ಯುದ್ಧಕ್ಕೆ ಬಂದಿದ್ದಾನೆ. ಬೇಗನೆ ಕವಚ ತೊಟ್ಟು ಸಿದ್ಧನಾಗು" ಎಂದನು. ಆದರೆ ರಾಮನು ಶಾಂತನಾಗಿಯೇ ಇದು ಲಕ್ಷ್ಮಣನ ಯೋಚನೆಯು ತಪ್ಪೆಂದು ತಿಳಿಸಿದನು. ಪ್ರಾಜ್ಞನಾದ ಭರತನು ಅಂತಹ ಕೆಟ್ಟಕೆಲಸ ಮಾಡನೆಂದೂ ಹೇಳಿದನು.

ಆ ವೇಳೆಗೆ ಸರಿಯಾಗಿ ದೂರದಲ್ಲಿ ಭರತನು ವೇಗವಾಗಿ ಬರುತ್ತಿರುವುದನ್ನು ಅವರು ಕಂಡರು. ಭರತನು ತನ್ನ ಸೇನೆಯನ್ನು ದೂರದಲ್ಲೇ ನಿಲ್ಲಿಸಿ ತಾನೊಬ್ಬನೆ ನಡೆದು ಬಂದಿದ್ದನು. ಶ್ರೀರಾಮನ ಆ ವೇಷವನ್ನೂ ಸ್ಥಿತಿಯನ್ನೂ

ದೂರದಿಂದಲೇ ನೋಡಿದ ಭರತನ ಕಣ್ಣುಗಳು ತುಂಬಿಬಂದುವು. ಓಡಿಬಂದ ವನೇ "ರಾಮಾ" ಎಂದು ರಾಮನ ಪಾದಗಳ ಮೇಲೆ ಬಿದ್ದುಬಿಟ್ಟನು. ರಾಮನು ಆವನನ್ನು "ಭರತಾ" ಎಂದು ಪ್ರೀತಿಯಿಂದ ಎತ್ತಿದನು. ಎದ್ದುಕುಳಿತ ಭರತನು ನಿಲ್ಲಲಾರದೆ ಚಿಕ್ಕಮಗುವಿನಂತೆ ಬಿಕ್ಕಿಬಿಕ್ಕಿ ಅತ್ತನು. ಅಷ್ಟರಲ್ಲಿ ಶತ್ರುಘ್ನನೂ ಕಣ್ಣೀರು ಸುರಿಸುತ್ತ ಅಲ್ಲಿಗೆ ಬಂದು ಅಣ್ಣಂದಿರಿಗೆ ನಮಸ್ಕರಿಸಿ ನಿಂತನು. ಇವನ್ನು ಕಂಡು ರಾಮನೂ ಕಣ್ಣು ಒರಸಿಕೊಂಡನು. ಅಷ್ಟು ಹೊತ್ತಿಗೆ ಇತರರೆಲ್ಲರೂ ಅಲ್ಲಿ ಬಂದು ನೆರೆದರು.

ಬಂಧುಪ್ರೇಮಿಯಾದ ರಾಮನು ಭರತನೊಂದಿಗೆ ಕೇಕಯ ರಾಜ್ಯದ, ಅಯೋಧ್ಯೆಯ ಕುರಿತು ಮಾತಾಡಿದನು. ತಂದೆಯ ಕ್ಷೇಮದ ಕುರಿತು ಹಂಬಲದಿಂದ ವಿಚಾರಿಸಿದನು. ಭರತನು ಕಣ್ಣೀರು ಸುರಿಸುತ್ತ ಉತ್ತರವಿತ್ತನು.

"ಅಣ್ಣಾ! ನೀನು ಅರಣ್ಯಕ್ಕೆ ಬಂದೆ. ನಾನು ವ್ರಜಗಿರಿಯಲ್ಲಿದ್ದೆ. ಆಗಲೇ ಪೂಜ್ಯರಾದ ತಂದೆಯವರು ಸ್ವರ್ಗಸ್ಥರಾದರು. ಆದ್ದರಿಂದ ನೀನು ಅಯೋಧ್ಯೆಗೆ ಬಂದು ರಾಜನಾಗು".

ದಾರುಣವಾದ ಈ ವಾರ್ತೆಯನ್ನು ಕೇಳಿ ರಾಮನು ಸಹಿಸದಾದನು. ಒಮ್ಮೆಗೇ ಎಲ್ಲವೂ ನೀರವವಾಯಿತು. ರಾಮ ಲಕ್ಷ್ಮಣ ಭರತ ಶತ್ರುಘ್ನ ಸೀತೆ ಮುಂತಾಗಿ ಎಲ್ಲರೂ ಕಣ್ಣೀರು ಸುರಿಸಿದರು. ಆಗ ಅಲ್ಲಿದ್ದ ಮರಗಿಡಗಳೂ ಶೋಕಿಸಿದಂತಹ ಮೌನವಾವರಿಸಿತು. ರಾಮನು ಹೇಗಾದರೂ ಸುಧಾರಿಸಿಕೊಂಡು ಮಂದಾಕಿನೀ ನದಿಯೆಡೆಗೆ ಹೋಗಿ ತಂದೆಯ್ಗು ತಿಲೋದಕ ಅರ್ಪಿಸಿದನು. ಅಷ್ಟು ಹೊತ್ತಿಗೆ ಅಲ್ಲಿಗೆ ರಾಣಿಯರೆಲ್ಲರೂ ಬಂದರು. ರಾಮನನ್ನು ನೋಡಿದಾಗ ಕೌಸಲ್ಯೆಗೆ ದುಃಖ ಉಕ್ಕಿಬಂತು. "ಅರಮನೆಯಲ್ಲಿ ಸಕಲ ಸಂಪತ್ತಿನಿಂದ ಮೆರೆಯುವವನು ಈ ಕಾಡಿನಲ್ಲಿ ಹೀಗಿರಬೇಕಾಯಿತಲ್ಲಾ" ಎಂದು ಆಕೆ ಮರುಗಿದಳು. ಸೀತೆಯನ್ನು ಕಂಡು, ಆಕೆಯನ್ನು ತಬ್ಬಿಕೊಂಡಳು. "ಜನಕರಾಜನಲ್ಲಿ ಹುಟ್ಟಿ, ಅಯೋಧ್ಯೆಯ ಅರಸುಮಗನ ಕೈಹಿಡಿದೂ ನಿನಗೆ ಹೀಗಾಯಿತಲ್ಲಾ" ಎಂದು ತನ್ನ ದುಃಖವನ್ನು ತೋಡಿಕೊಂಡಳು.

ಅನಂತರ ಅವರೆಲ್ಲರೂ ಪರ್ಣಕುಟಿಯ ಬಳಿಗೆ ಬಂದರು. ವಸಿಷ್ಠ ಸುಮಂತ್ರಾದಿಗಳು ಮುಂದಿನ ಯೋಚನೆ ಮಾಡಿದರು. ಭರತನು ರಾಮನೇ

ಬಂದು ರಾಜ್ಯವಾಳಬೇಕೆಂದನು. ಪಿತೃವಾಕ್ಯಪಾಲನೆಗಾಗಿ ಬಂದ ತಾನು ಹದಿನಾಲ್ಕು ವರ್ಷ ವನವಾಸ ಮುಗಿಸಿಯೇ ಮರಳುವುದು ತನ್ನ ಕರ್ತವ್ಯವೆಂದು ರಾಮನು ಭರತನನ್ನು ಸಮಾಧಾನಪಡಿಸಿದನು. ಜಾಬಾಲಿ ಮೊದಲಾದ ಋಷಿಗಳೂ ರಾಮನು ಹಿಂತಿರುಗುವುದೇ ಉಚಿತವೆಂದೂ ಸೂಚಿಸಿದರು. ಯಾರೇನೂ ಹೇಳಿದರೂ ರಾಮನು ತಂದೆಯ ಆಜ್ಞೆಯನ್ನು ಒಂದಿಷ್ಟೂ ತಪ್ಪದೆ ನಡೆಸುವುದೇ ತನ್ನ ಧರ್ಮವೆಂದನು. ಕೊನೆಗೆ ಭರತನೇ ರಾಮನನ್ನು ಹೀಗೆಂದು ಬೇಡಿಕೊಂಡನು. "ಅಣ್ಣಾ! ನೀನು ಅಯೋಧ್ಯೆಗೆ ಬರಲಾರೆ; ನಾನು ರಾಜನಾಗಲಾರೆ. ಆದ್ದರಿಂದ ನಿನ್ನ ಪಾದುಕೆಗಳನ್ನು ನನಗೆ ದಯಪಾಲಿಸು. ಅವುಗಳನ್ನೇ ಸಿಂಹಾಸನದಲ್ಲಿರಿಸಿ, ನಿನ್ನ ಹೆಸರಿನಲ್ಲಿ ರಾಜ್ಯವನ್ನು ಹದಿನಾಲ್ಕು ವರ್ಷಗಳ ವರೆಗೆ ನೋಡಿಕೊಳ್ಳುವೆನು".

ತಮ್ಮನ ಬೇಡಿಕೆಗೆ ರಾಮನು ಒಪ್ಪಿದನು. ಭರತನು ಶ್ರೀರಾಮಚಂದ್ರನ ಪಾದುಕೆಗಳನ್ನು ಪರಮಪೂಜ್ಯಗಳೆಂದು ಭಾವಿಸಿ ತಲೆಯಲ್ಲಿ ಹೊತ್ತುಕೊಂಡು ಹೊರಟನು. ಶ್ರೀರಾಮನು ಎಲ್ಲರಿಗೂ ವಂದಿಸಿ ಉಪಚಾರದ ಮಾತುಗಳನ್ನು ಹೇಳಿ ಅವರನ್ನು ಬೀಳ್ಕೊಟ್ಟನು. ಭರತನ ಪರಿವಾರವು ಕಣ್ಮರೆಯಾಗುವ ವರೆಗೂ ಅದನ್ನೇ ನೋಡುತಿದ್ದ ರಾಮನು ದುಃಖದಿಂದಲೇ ಪರ್ಣಶಾಲೆಯನ್ನು ಸೇರಿದನು.

ಭರತನು ಹಿಂತಿರುಗಿ ಬರುವಾಗ ಭರದ್ವಾಜ ಆಶ್ರಮಕ್ಕೆ ಬಂದು ಅವರ ಆಶೀರ್ವಾದವನ್ನು ಪಡೆದು ಅಯೋಧ್ಯೆಗೆ ಹಿಂತಿರುಗಿದನು. ಶ್ರೀರಾಮನು ಬರಲಿಲ್ಲವೆಂದು ಕೇಳಿದ ಪ್ರಜೆಗಳು ಮತ್ತಷ್ಟು ಕಳೆಗುಂದಿದರು. ಅಯೋಧ್ಯೆಗೆ ಮರಳಿದ ಭರತನಿಗೆ ರಾಮನಿಲ್ಲದ ಆ ಪಟ್ಟಣದಲ್ಲಿರುವುದೇ ಅಸಹ್ಯವಾಯಿತು. ಆದಕ್ಕಾಗಿ ಅವನು ವಸಿಷ್ಠರ ಅನುಮತಿಯನ್ನು ಪಡೆದು ಮಿತಪರಿವಾರದೊಂದಿಗೆ ಅಯೋಧ್ಯೆಯ ಸಮೀಪವಿರುವ ನಂದಿಗ್ರಾಮಕ್ಕೆ ಹೋದನು. ಶ್ರೀರಾಮನ ಪಾದುಕೆಗಳನ್ನು ಸಿಂಹಾಸನದಲ್ಲಿರಿಸಿದನು. ಆಗ ಅಲ್ಲಿದ್ದ ಪುರಜನರಿಗೂ ಸಾಮಂತರಿಗೂ ಭರತನು ತನ್ನ ನಿರ್ಧಾರವನ್ನು ತಿಳಿಸಿದನು. ಭರತನು ಅಲ್ಲಿಯೇ ಇದ್ದು ಆ ಪಾದುಕೆಗಳಿಗೆ ಎಲ್ಲ ರಾಜಮರ್ಯಾದೆಯನ್ನು ಸಲ್ಲಿಸಿ ತಾನು ರಾಮನಂತೆ ವ್ರತನಿಯಮದಿಂದ ಕಂದಮೂಲಾದಿಗಳನ್ನು ತಿಂದು ಸರಳಜೀವನ ಮಾಡುತಿದ್ದನು.

ಇತ್ತ ಅರಣ್ಯದಲ್ಲಿ ಶ್ರೀರಾಮಚಂದ್ರನು ಚಿತ್ರಕೂಟದಲ್ಲೇ ಕೆಲವು ಕಾಲ ವಾಸವಾಗಿದ್ದನು. ಅವರು ಅಲ್ಲಿರುವುದನ್ನು ನೋಡಿದ ರಾಕ್ಷಸರು ಋಷಿಗಳಿಗೆ ಹಿಂಸೆಕೊಡತೊಡಗಿದರು. ಅದಕ್ಕಾಗಿ ಋಷಿಗಳು ಬೇರೆಡೆಗೆ ಹೋಗತೊಡಗಿದರು. ರಾಮನು ಇದನ್ನು ವಿಚಾರಿಸಿ ತಿಳಿದುಕೊಂಡನು. ಋಷಿಗಳಾರೂ ಹೋಗಬಾರದೆಂದು ಸಮಾಧಾನಪಡಿಸಿದನು. ಆದರೆ ಅವರಾರೂ ನಿಲ್ಲಲಿಲ್ಲ. ಕೊನೆಗೆ ಋಷಿಗಳಾರೂ ಇಲ್ಲದ್ದರಿಂದ ರಾಮನೂ ಚಿತ್ರಕೂಟವನ್ನು ಬಿಟ್ಟು ದಂಡಕಾರಣ್ಯಕ್ಕೆ ಹೋದನು. ಅಲ್ಲಿ ಅವರು ಒಂದು ದಿನ ಅತ್ರಿಋಷಿಗಳ ಆಶ್ರಮದಲ್ಲಿದ್ದರು. ಅತ್ರಿಋಷಿಗಳ ಪತ್ನಿ ಮಹಾತಪಸ್ವಿನಿಯಾದ ಅನಸೂಯೆಯು ಸೀತಾದೇವಿಯನ್ನು ಪ್ರೇಮಾದರಗಳಿಂದ ಬರಮಾಡಿಕೊಂಡು ಉಪಚರಿಸಿದಳು. ಸೀತೆಯೂ ಆ ಋಷಿಪತ್ನಿಗೆ ತನ್ನ ತೌರುಮನೆಯ ವಿಷಯವನ್ನೂ ಗಂಡನಮನೆಯ ವಿಷಯವನ್ನೂ ತಿಳಿಸಿದಳು. ಮುದ್ದಾದ ಆಕೆಯ ಮಾತುಗಳನ್ನು ಕೇಳಿ ಅನಸೂಯೆ ಸಂತೋಷಗೊಂಡು ಅವಳಿಗೆ ದಿವ್ಯಾಭರಣಗಳನ್ನಿತ್ತು ಹರಸಿದಳು.

ಮರುದಿನ ಬೆಳಗ್ಗೆ ಅವರು ಮೂವರೂ ಅತ್ರಿಋಷಿಗಳಿಗೆ ವಂದಿಸಿ ಹೊರಟರು. ಅತ್ರಿಋಷಿಗಳು ರಾಮನಿಗೆ ಮುಂದಿನ ಕಾಡಿನಲ್ಲಿ ರಾಕ್ಷಸರ ಬಾಧೆಯಿದೆಯೆಂದೂ ಜಾಗರೂಕತೆಯಿಂದ ಇರಬೇಕೆಂದೂ ತಿಳಿಸಿದರು. ಸೀತಾರಾಮಲಕ್ಷ್ಮಣರು ಮುನ್ನಡೆದರು.

## ೩. ಅರಣ್ಯಕಾಂಡ.

ಶ್ರೀರಾಮಚಂದ್ರನು ಹೆಂಡತಿಯನ್ನೂ, ತಮ್ಮನನ್ನೂ ಕೂಡಿಕೊಂಡು ದಂಡಕಾರಣ್ಯವನ್ನು ಸೇರಿದನು. ಅಲ್ಲಿ ಅನೇಕ ಋಷಿಗಳು ಇದ್ದರು. ಶ್ರೀರಾಮನು ಆ ಮಹಾಮುನಿಗಳನ್ನು ಕಂಡು ನಮಸ್ಕರಿಸಿದನು. ಅವರು ರಾಮನೇ ಮೊದಲಾದವರನ್ನು ಉಪಚರಿಸಿ, ಧರ್ಮರಕ್ಷಕನಾದ ರಾಮನೇ ತಮ್ಮನ್ನು ಕಾಪಾಡಬೇಕೆಂದು ಕೇಳಿಕೊಂಡರು.

ಮರುದಿನ ರಾಮಲಕ್ಷ್ಮಣರು ಸೀತೆಯೊಂದಿಗೆ ಆ ಮುನಿಗಳ ಆಶೀರ್ವಾದ ಪಡೆದು ಆ ಕಾಡಿನಲ್ಲಿ ಮುಂದಕ್ಕೆ ಪಯಣಮಾಡಿದರು.

ಅವರು ಭಯಂಕರವಾದ ಕಾಡಿನ ಮಧ್ಯಕ್ಕೆ ಬಂದಾಗ ಘೋರರೂಪಿನ ರಾಕ್ಷಸನೊಬ್ಬನು ಬಂದನು. ಬಂದವನೇ ಅವರ ಮೇಲೆ ಬಿದ್ದು ಸೀತೆಯ ನ್ನೆತ್ತಿಕೊಂಡು ನಡೆದನು. ಹಾಗೆ ಹೋಗುವಾಗ, "ನನ್ನ ಹೆಸರು ವಿರಾಧ. ನಾನು ನಿಮ್ಮಿಬ್ಬರನ್ನೂ ಈಗಲೇ ತಿಂದು ಈ ಹೆಣ್ಣನ್ನು ನನ್ನ ಹೆಂಡತಿ ಯನ್ನಾಗಿ ಮಾಡಿಕೊಳ್ಳುತ್ತೇನೆ" ಎಂದನು. ಇದನ್ನು ಕೇಳಿ ರಾಮಲಕ್ಷ್ಮಣ ರಿಗೆ ದುಃಖವಾದರೂ ಅವರು ಎದೆಗೆಡದೆ ವಿರಾಧನ ಮೇಲೇರಿ ಹೋದರು. ಆಗ ಅವನು ಸೀತೆಯನ್ನು ಅಲ್ಲೇ ಬಿಟ್ಟು ರಾಮಲಕ್ಷ್ಮಣರನ್ನೇ ಎತ್ತಿ ಕೊಂಡು ಅಲ್ಲಿಂದ ಹೊರಟನು. ಆಗ ಸೀತೆ ಗೋಳಿಡುತ್ತಾ ಆ ರಾಕ್ಷಸ ನೊಡನೆ ತನ್ನನ್ನಾದರೂ ತಿನ್ನು; ಅವರನ್ನು ಬಿಟ್ಟುಬಿಡು ಎಂದು ಗೋಳಿ ಟ್ಟಳು. ರಾಮಲಕ್ಷ್ಮಣರು ತಮ್ಮನ್ನೆತ್ತಿಕೊಂಡಿದ್ದ ರಾಕ್ಷಸನ ತೋಳುಗಳನ್ನೇ ಕತ್ತರಿಸಿಬಿಟ್ಟರು. ಆಗ ಅವನು ನೆಲಕ್ಕೆ ಬಿದ್ದುಬಿಟ್ಟನು. ಆಗ ಅವನಿಗೆ ಜ್ಞಾನೋದಯವಾಯಿತು. ಅವನು ತನ್ನ ಕಥೆಯನ್ನು ಹೇಳಿ ಶ್ರೀರಾಮ ನನ್ನು ಶರಭಂಗಋಷಿಗಳ ಆಶ್ರಮಕ್ಕೆ ಹೋಗಬೇಕೆಂದು ಕೇಳಿಕೊಂಡನು. ಅವನಾದರೊ ತುಂಬುರನೆಂಬ ಗಂಧರ್ವನಾಗಿದ್ದನು. ಕುಬೇರನ ಶಾಪದಿಂದ ಅವನಿಗೆ ಆ ರಾಕ್ಷಸರೂಪ ಬಂದಿತ್ತು. ರಾಮಲಕ್ಷ್ಮಣರು ಅವನ ಸೂಚನೆ ಯಂತೆ ಅವನ ರಾಕ್ಷಸದೇಹವನ್ನು ಅಲ್ಲೇ ನೆಲದಲ್ಲಿ ಹೂಳಿಟ್ಟು ಶರಭಂಗ ಋಷಿಗಳ ಆಶ್ರಮಕ್ಕಾಗಿ ಮುಂದೆ ನಡೆದರು.

ಅವರು ಶರಭಂಗಋಷಿಗಳ ಆಶ್ರಮಕ್ಕೆ ಸಮೀಪವಾಗುವಾಗಲೇ ದೇವೇಂದ್ರನು ಅಲ್ಲಿಗೆ ಬಂದು ಹಿಂತಿರುಗುತಿದ್ದನು. ತನ್ನ ಆಶ್ರಮಕ್ಕೆ ಬಂದ ಸೀತಾರಾಮಲಕ್ಷ್ಮಣರನ್ನು ಶರಭಂಗಋಷಿಯು ಆದರದಿಂದ ಸ್ವಾಗ ತಿಸಿ ಉಪಚರಿಸಿದನು. "ಶ್ರೀರಾಮಾ! ನಾನೀಗ ಬ್ರಹ್ಮಲೋಕಕ್ಕೆ ಹೋಗು ತ್ತೇನೆ. ಈ ಅರಣ್ಯದಲ್ಲಿ ಸುತೀಕ್ಷ್ಣನೆಂಬ ಮುನಿಯಿದ್ದಾನೆ. ಅವನು ನಿನಗೆ ವಾಸಕ್ಕೆ ಯೋಗ್ಯವಾದ ಸ್ಥಳವನ್ನು ತೋರಿಸುವನು. ನೀವಲ್ಲಿಗೆ ಹೋಗಿರಿ" ಎಂದನು. ಅನಂತರ ಶರಭಂಗಋಷಿಯು ಮಂತ್ರಾಗ್ನಿಯಿಂದ ತನ್ನ ದೇಹವನ್ನು ಸುಟ್ಟುಕೊಂಡು ದಿವ್ಯ ದೇಹದಿಂದ ಬ್ರಹ್ಮಲೋಕಕ್ಕೆ ಹೋದನು. ಆಗ ಅಲ್ಲಿದ್ದ ಋಷಿಗಳೆಲ್ಲ ಶ್ರೀರಾಮನೊಡನೆ ತಮ್ಮನ್ನು ರಕ್ಷಿಸಬೇಕೆಂದು ಬೇಡಿಕೊಂಡರು. ಶ್ರೀರಾಮನು ಅವರ ಪ್ರಾರ್ಥನೆಯನ್ನು

ಮನ್ನಿಸಿ ದುಷ್ಟರಾದ ರಾಕ್ಷಸರನ್ನು ವಧಿಸುವುದಾಗಿ ಮಾತು ಕೊಟ್ಟನು. ಅನಂತರ ಅವರು ಮೂವರೂ ಸುತೀಕ್ಷ್ಣಋಷಿಯ ಆಶ್ರಮಕ್ಕೆ ನಡೆದರು. ನದಿಗಳನ್ನು ದಾಟಿ ಬೆಟ್ಟದ ತಪ್ಪಲಲ್ಲಿ ರಮ್ಯವಾದ ವನದ ಮಧ್ಯದಲ್ಲಿರುವ ಆ ಆಶ್ರಮಕ್ಕೆ ಅವರು ಬಂದಾಗ ಸುತೀಕ್ಷ್ಣನು ಅವರನ್ನು ಸ್ವಾಗತಿಸಿ ರಾಮನನ್ನು ಪ್ರೀತಿಯಿಂದ ತಬ್ಬಿಕೊಂಡನು. ವೀರನಾದ ಶ್ರೀರಾಮನಿಗೆ ತಾನು ಸಂಪಾದಿಸಿದ ಪುಣ್ಯವನ್ನಿತ್ತು ಶ್ರೀರಾಮನು ಅನುಭವಿಸಬೇಕೆಂದು ಹರಸಿದನು. ಶ್ರೀರಾಮನು ಆ ದಿನ ಅಲ್ಲಿದ್ದು ಮರುದಿನ ಕಾಡಿನಲ್ಲೇ ಮುಂದಕ್ಕೆ ಪಯಣಮಾಡಿದನು. ಹೀಗೆ ಅವರು ಹೋಗುತ್ತಿರುವಾಗ ಸೀತಾದೇವಿಯು ರಾಮನೊಡನೆ ಅವನು ಋಷಿಗಳಿಗಾಗಿ ರಾಕ್ಷಸರನ್ನು ವೈರವಿಲ್ಲದೆ ಕೊಲ್ಲುವುದು ಸಲ್ಲದೆಂದಳು.

"ದೇವಿ! ನಿನ್ನ ಮಾತು ಉಚಿತವಾದರೂ ಶಿಷ್ಟರಿಗೆ ಸಂಕಟಕೊಡುವ ದುಷ್ಟರನ್ನು ಶಿಕ್ಷಿಸುವುದು ಕ್ಷತ್ರಿಯನ ಕರ್ತವ್ಯ. ಆದ್ದರಿಂದ ನಾನು ಋಷಿಗಳಿಗೆ ಅಭಯಕೊಟ್ಟಂತೆ ದುಷ್ಟರಾಕ್ಷಸರನ್ನು ವಧಿಸುವುದೂ ನನಗೆ ಧರ್ಮವಾಗಿದೆ" ಎಂದು ಶ್ರೀರಾಮನು ಸೀತಾದೇವಿಯ ಸಂದೇಹ ನಿವಾರಣೆ ಮಾಡಿದನು. ಆ ಮೇಲೆ ಅವರು ಮಾಂಡಕರ್ಣಿ ಮುನಿಯ ವೃತ್ತಾಂತವನ್ನು ತಿಳಿದುಕೊಂಡು ಮುಂದಕ್ಕೆ ಪಯಣಮಾಡಿ ಅಗಸ್ತ್ಯ ಮುನಿಯ ತಮ್ಮನ ಆಶ್ರಮವನ್ನು ಸೇರಿದರು. ಅಲ್ಲಿ ಮೂರು ದಿನಗಳ ವರೆಗಿದ್ದು ಮುಂದೆ ಅಗಸ್ತ್ಯನ ಆಶ್ರಮಕ್ಕಾಗಿ ನಡೆದರು. ಅಗಸ್ತ್ಯನಾದರೋ ಮಹಾಮಹಿಮನಾಗಿದ್ದನು. ಬ್ರಾಹ್ಮಣರನ್ನು ಕೊಲ್ಲುತಿದ್ದ ವಾತಾಪಿ ಮತ್ತು ಇಲ್ವಲರೆಂಬ ರಾಕ್ಷಸ ಸಹೋದರರನ್ನು ಕೊಂದು ಬ್ರಾಹ್ಮಣರ ಸಂಕಟ ನಿವಾರಣೆಮಾಡಿದ್ದನು. ಅಗಸ್ತ್ಯರ ಆಶ್ರಮ ಸಮೀಪಿಸಿದೊಡನೆ, ಶ್ರೀ ರಾಮನ ಸೂಚನೆಯಂತೆ ಲಕ್ಷ್ಮಣನು ಆಶ್ರಮಕ್ಕೆ ಹೋಗಿ ಅವರು ಬಂದಿರುವುದನ್ನು ಅಗಸ್ತ್ಯನ ಶಿಷ್ಯನಿಗೆ ತಿಳಿಸಿದನು. ಶಿಷ್ಯನಿಂದ ಇದನ್ನು ತಿಳಿದ ಅಗಸ್ತ್ಯನು ರಾಮಾದಿಗಳನ್ನು ಸನ್ಮಾನಿಸಿ ಕರೆತರುವಂತೆ ಶಿಷ್ಯನಿಗೆ ಹೇಳಿದನು. ಶ್ರೀರಾಮನು ಬಂದೊಡನೆ ಅಗಸ್ತ್ಯಮುನಿಯು ಅವನನ್ನು ಗೌರವದಿಂದ ಉಪಚರಿಸಿದನು. ಅವರಿಬ್ಬರೂ ಮಾತನಾಡುತಿದ್ದು ಕೊನೆಯಲ್ಲಿ ಅಗಸ್ತ್ಯನು ಬ್ರಹ್ಮನಿರ್ಮಿತವಾದ ಧನುಸ್ಸನ್ನೂ ಬೇಕಿಯಂತಹ ಬಾಣಗಳಿರುವ

ಬತ್ತಳಿಕೆಗಳನ್ನು ಚಿನ್ನದ ಹಿಡಿಯಿರುವ ಖಡ್ಗವನ್ನೂ ಶ್ರೀರಾಮುನಿಗೆ ಕೊಟ್ಟನು. "ಶ್ರೀರಾಮಾ! ಈ ವೈಷ್ಣ-ಧನುಸ್ಸು ಬಾಣಬತ್ತಳಿಕೆ ಖಡ್ಗಗಳಿಂದ ನೀನು ಹಿಂದೆ ವಿಷ್ಣುವು ದೈತ್ಯರನ್ನು ಸಂಹರಿಸಿದಂತೆ ರಾಕ್ಷಸರ ಸಂಹಾರ ಮಾಡು" ಎಂದು ಆ ಮುನಿಯು ರಾಮನನ್ನು ಹರಸಿದನು. ಮತ್ತು ಅವರ ವಾಸಕ್ಕೆ ಪಂಚವಟಿಯು ಯೋಗ್ಯವಾದ ಸ್ಥಳವೆಂದೂ ಸೂಚಿಸಿದನು. ಶ್ರೀರಾಮನು ಅಗಸ್ತ್ಯನಿಗೆ ತನ್ನ ಕೃತಜ್ಞತೆಗಳನ್ನು ಸೂಚಿಸಿದನು. ಮುನಿಯ ಅನುಗ್ರಹದಿಂದ ತಾನು ಧನ್ಯನಾದೆನೆಂದು ಹೇಳಿದನು.

ಅವರು ಅಗಸ್ತ್ಯಾಶ್ರಮದಿಂದ ಹೊರಟು ಪಂಚವಟಿಗೆ ಪಯಣ ಬೆಳೆಸಿದರು. ದಾರಿಯಲ್ಲಿ ಅವರು ದೊಡ್ಡ ದೇಹವುಳ್ಳ ಮಹಾಪರಾಕ್ರಮಿಯಾದ ಜಟಾಯುವನ್ನು ಕಂಡರು. ಜಟಾಯು ರಾಮಲಕ್ಷ್ಮಣರಿಗೆ ತನ್ನ ಪರಿಚಯ ಮಾಡಿಕೊಟ್ಟನು. "ನಾನು ಅರುಣನ ಮಗನು. ನನಗೊಬ್ಬ ತಮ್ಮನಿರುವನು. ಅವನ ಹೆಸರು ಸಂಪಾತಿ. ನಾನು ದಶರಥನ ಪ್ರಿಯಮಿತ್ರನು. ರಾಕ್ಷಸರಿಂದ ತುಂಬಿದ ಈ ಕಾಡಿನಲ್ಲಿ ನನ್ನನ್ನು ತಮ್ಮ ಗೆಳೆಯನೆಂದು ತಿಳಿದುಕೊಳ್ಳಿ". ಜಟಾಯು ತಮ್ಮ ಗೆಳೆಯನೆಂದು ತಿಳಿದು ರಾಮಲಕ್ಷ್ಮಣರಿಗೆ ಬಹಳ ಸಂತೋಷವಾಯಿತು. ಅವರೆಲ್ಲರೂ ಪಂಚವಟಿಯನ್ನು ಸೇರಿದರು. ಆ ರಮ್ಯವಾದ ವನದಲ್ಲಿ ಗೋದಾವರಿಯ ದಂಡೆಯಲ್ಲಿ ಲಕ್ಷ್ಮಣನು ಅವರಿಗಾಗಿ ಒಂದು ಆಶ್ರಮವನ್ನು ಕಟ್ಟಿದನು. ಆ ಆಶ್ರಮದಲ್ಲಿ ರಾಮಾದಿಗಳು ಸಂತೋಷದಿಂದ ದಿನಗಳೆದರು.

ಪಂಚವಟಿಯಲ್ಲಿ ಶ್ರೀರಾಮನು ಸೀತಾಲಕ್ಷ್ಮಣರೊಂದಿಗೆ ಸುಖದಿಂದಿದ್ದನು. ಆ ರಮ್ಯವನವೇ ಅವರಿಗೆ ಅಯೋಧ್ಯೆಯ ನಂದನವನವಾಯಿತು. ಆದರೂ ಅವರು ಒಮ್ಮೊಮ್ಮೆ ಅಯೋಧ್ಯೆಯಲ್ಲಿರುವ ತಮ್ಮ ಬಂಧುಗಳನ್ನು ನೆನೆದು ಅವರು ಯಾವ ರೀತಿಯ ಕಷ್ಟದಲ್ಲಿರುವರೋ ಎಂದು ಯೋಚಿಸುತ್ತಲೂ ಇದ್ದರು.

ಒಂದು ದಿನ ಸೀತಾಲಕ್ಷ್ಮಣರೊಂದಿಗೆ ಶ್ರೀರಾಮಚಂದ್ರನು ವನಶೋಭೆಯನ್ನು ಬಣ್ಣಿಸುತ್ತಿರುವಾಗ ರಾವಣನ ತಂಗಿಯಾದ ಶೂರ್ಪನಖೆಯೆಂಬ ರಾಕ್ಷಸಿಯು ಅವರಿದ್ದಲ್ಲಿಗೆ ಬಂದಳು. ಆಕೆ ಶ್ರೀರಾಮನಲ್ಲಿ ಮೋಹ

ಗೊಂಡಳು. ಅವನನ್ನು ತನ್ನ ಪತಿಯಾಗೆಂದು ಬೇಡಿಕೊಂಡಳು. ಆಗ ರಾಮನು ತನಗೆ ಪತ್ನಿಯಿರುವಳೆಂದು ಸೀತೆಯನ್ನು ತೋರಿಸಿದನು. ತನಗಿಂತಲೂ ಸುಂದರನಾದ ತನ್ನ ತಮ್ಮ ಲಕ್ಷ್ಮಣನಿರುವಲ್ಲಿಗೆ ಹೋಗೆಂದು ಸಮೀಪದಲ್ಲಿರುವ ಲಕ್ಷ್ಮಣನ ಹತ್ತಿರಕ್ಕೆ ಕಳುಹಿಸಿದನು. ಲಕ್ಷ್ಮಣನು, "ತಾನು ರಾಮನ ದಾಸನು. ನನ್ನನ್ನು ಮದುವೆಯಾದರೆ ಸೀತೆಯ ಪರಿಚರ್ಯೆ ಮಾಡಬೇಕು. ರಾಮನನ್ನೇ ಮದುವೆಯಾಗು" ಎಂದನು. ಹೀಗೆ ಶೂರ್ಪನಖೆ ರಾಮಲಕ್ಷ್ಮಣರಲ್ಲಿಗೆ ಓಡಾಡಿ ತನ್ನನ್ನು ಮದುವೆಯಾಗಲು ಬೇಡಿಕೊಂಡುದು ವ್ಯರ್ಥವಾಗಲು ಸೀತೆಯನ್ನೇ ನುಂಗಿಬಿಡುವೆನೆಂದು ಆರ್ಭಟಿಸುತ್ತ ಬಂದಳು. ಆಗ ಲಕ್ಷ್ಮಣನು, ರಾಮನ ಸೂಚನೆಯಂತೆ, ಆ ಕಾಮಾಂಧೆಯಾದ ರಾಕ್ಷಸಿಯ ಕಿವಿಮೂಗುಗಳನ್ನು ಕತ್ತರಿಸಿಬಿಟ್ಟನು. ಆಕೆ ಬೊಬ್ಬಿಡುತ್ತಾ ಕಾಡನ್ನು ಹೊಕ್ಕಳು.

ಆ ಕಾಡಿನ ಒಡೆಯನಾದ ಖರನು ಶೂರ್ಪನಖಿಗೆ ಅಣ್ಣನಾಗಬೇಕು. ಆವನು ತಂಗಿಯ ಅವಸ್ಥೆಯನ್ನು ನೋಡಿ ಕೋಪಗೊಂಡನು. ಯಮನಿಗೆ ಸಮಾನರಾದ ತನ್ನ ಹದಿನಾಲ್ಕು ಮಂದಿ ವೀರರನ್ನು ರಾಮನನ್ನು ಕೊಲ್ಲಲು ಕಳುಹಿಸಿದನು. ಆದರೆ ಆ ಹದಿನಾಲ್ಕು ಮಂದಿಯೇ ರಾಮನಿಂದ ಯಮನೂರಿಗೆ ಹೋದರು. ರಾಮನೊಬ್ಬನಿಂದಲೇ ತನ್ನ ವೀರರು ಹತರಾದರೆಂದು ಕೇಳಿ ಖರನು ಕೋಪದಿಂದ ಕಿಡಿಕಾರಿದನು. ತನ್ನ ಸೇನಾಪತಿಯಾದ ದೂಷಣನನ್ನು ಕೂಡಿಕೊಂಡು ಹದಿನಾಲ್ಕು ಸಾವಿರ ರಾಕ್ಷಸಸೇನೆಯೊಡನೆ ಯುದ್ಧಕ್ಕೆ ಹೊರಟನು. ಅವನೊಂದಿಗೆ ಮಹಾವೀರನಾದ ತ್ರಿಶಿರನೂ ಕೂಡಿಕೊಂಡನು. ಮಳೆಗಾಲದ ಕಾರ್ಮೋಡದಂತೆ ಬರುತ್ತಿರುವ ರಾಕ್ಷಸಸೇನೆಯನ್ನು ಶ್ರೀರಾಮನು ನೋಡಿದನು. ಆಗ ಅವನು ಸೀತೆಯ ರಕ್ಷಣೆಗೆ ಲಕ್ಷ್ಮಣನನ್ನು ನೇಮಿಸಿ ತಾನು ಅಗ್ನಿಗೆ ಸಮವಾದ ಕವಚಾದಿಗಳನ್ನು ತೊಟ್ಟು ಬಿಲ್ಲುಬಾಣಗಳನ್ನು ಹಿಡಿದು ರಾಕ್ಷಸಸೇನೆಗೆ ಇದಿರಾದನು. ರಾಕ್ಷಸಪಡೆಯನ್ನು ನೋಡಿದ ರಾಮನು ರುದ್ರನಂತೆ ಕೋಪಗೊಂಡು ಆ ಸೇನೆಯ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದನು. ಘೋರವಾದ ಯುದ್ಧವಾಯಿತು. ಸೇನಾಪತಿಯಾದ ದೂಷಣನು ರಾಮಬಾಣದಿಂದ ಹತನಾದನು. ಹದಿನಾಲ್ಕು ಸಾವಿರ ಸೇನೆ ನಿರ್ನಾಮ

ನಾಯಿತು. ಆಗ ತ್ರಿಶಿರನು ಖರನನ್ನು ಜನಸ್ಥಾನಕ್ಕೆ ಹಿಂತಿರುಗಲು ಕೇಳಿಕೊಂಡನು. ಆದರೆ ಖರನು ಒಪ್ಪಲಿಲ್ಲ. ಅವರಿಬ್ಬರೂ ಕೂಡಿ ರಾಮನೊಡನೆ ಕಾದಿದರು. ಘೋರವಾದ ಸಮರವಾಯಿತು. ರಾಮನು ತ್ರಿಶಿರನ ತಲೆಗಳನ್ನು ನಾಲ್ಕು ಬಾಣಗಳಿಂದ ಕತ್ತರಿಸಿದನು. ಇದನ್ನು ಕಂಡು ಖರನು ಮತ್ತಷ್ಟು ಕೋಪಗೊಂಡು ಭಯಂಕರವಾಗಿ ಕಾದಾಡಿದನು. ಅವನು ಹರಿತವಾದ ಬಾಣಗಳಿಂದ ರಾಮನ ಧನುಸ್ಸನ್ನು ಕತ್ತರಿಸಿ ಕವಚವನ್ನು ಸೀಳಿದನು. ಆಗ ರಾಮನು ಅಗಸ್ತ್ಯರು ಕೊಟ್ಟ ಅಸ್ತ್ರಗಳನ್ನು ಪ್ರಯೋಗಿಸಿದನು. ಅದರಿಂದ ಖರನ ದೇಹವೆಲ್ಲ ರಕ್ತಮಯವಾಯಿತು. ಆಗ ಅವನು ಮುರಿದ ರಥದಿಂದ ಹಾರಿ ಮರವನ್ನು ಕಿತ್ತುಕೊಂಡು ರಾಮನ ಬಳಿಗೆ ಧಾವಿಸಿದನು. ಹಾಗೆ ಬರುತ್ತಿರುವ ಖರನ ಮೇಲೆ ರಾಮನು ಇಂದ್ರನು ಕೊಟ್ಟ ಬಾಣವನ್ನು ಪ್ರಯೋಗಿಸಿದನು. ಆ ಬಾಣಹತಿಗೆ ಖರನು ಧರೆಗೆ ಉರುಳಿದನು.

ಖರನೇ ಮೊದಲಾದ ರಾಕ್ಷಸರು ಸತ್ತರೆಂದು ಋಷಿಗಳಿಗೆ ಸಂತೋಷವಾಯಿತು. ಅವರು ಗುಂಪುಗುಂಪಾಗಿ ಬಂದು ಶ್ರೀರಾಮನನ್ನು ಹೊಗಳಿ ಹರಸಿಹೋದರು. ಅಷ್ಟರಲ್ಲಿ ಗುಹೆಯಲ್ಲಿ ಅವಿತಿದ್ದ ಸೀತಾಲಕ್ಷ್ಮಣರೂ ಅಲ್ಲಿಗೆ ಬಂದು ವಿಜಯಿಯಾದ ಅಣ್ಣನನ್ನು ಕಂಡು ಆನಂದಭರಿತರಾದರು.

ಖರ ದೂಷಣ ತ್ರಿಶಿರರನ್ನೂ ಹದಿನಾಲ್ಕು ಸಾವಿರ ರಾಕ್ಷಸಸೇನೆಯನ್ನೂ ದಶರಥರಾಜನ ಕುಮಾರನಾದ ರಾಮನು ಕೊಂದನೆಂಬ ವಾರ್ತೆಯನ್ನು ಅಕಂಪನನೆಂಬ ಗೂಢಚಾರನು ರಾವಣನಿಗೆ ತಿಳಿಸಿದನು. ಆದರೆ ಮಾರೀಚನ ಹಿತೋಕ್ತಿಗೆ ಕಿವಿಗೊಟ್ಟ ರಾವಣನು ರಾಮನ ಮೇಲೆ ಹಗೆ ತೀರಿಸುವ ಗೋಜಿಗೇ ಹೋಗಲಿಲ್ಲ. ಆದರೆ ಶೂರ್ಪನಖಿಯು ಮಾರಿಯಂತೆ ಅರಚಿಕೊಂಡು ಲಂಕೆಗೆ ಹೋದಳು. ಅಣ್ಣನ ಒಡ್ಡೋಲಗವನ್ನು ಹೊಕ್ಕು ತನ್ನ ಪಾಡನ್ನು ತೋಡಿಕೊಂಡಳು. “ಅಣ್ಣಾ! ದಂಡಕಾರಣ್ಯದಲ್ಲಿ ರಾಮಲಕ್ಷ್ಮಣರೆಂಬ ಸೋದರರಿದ್ದಾರೆ. ಅವರಲ್ಲಿ ರಾಮನ ಹೆಂಡತಿ ತ್ರಿಲೋಕಸುಂದರಿ. ಅವಳನ್ನು ನಿನಗಾಗಿ ತರಲು ಹೋದಾಗ ಲಕ್ಷ್ಮಣನು ನನಗೆ ಈ ರೀತಿ ಮಾಡಿದನು. ಅಣ್ಣಾ ನಾನು ಹೀಗಿರುವುದು ನಿನಗೆ ಚಂದವೇ? ಸೀತೆ ಹೆಂಡತಿಯಾಗದೆ ನೀನಿರುವುದೂ ಯೋಗ್ಯವೇ?”

ತಂಗಿಯ ಮಾತುಗಳನ್ನು ರಾವಣನು ಮತ್ತೆ ಮತ್ತೆ ಯೋಚಿಸಿದನು. ತಂಗಿಗಾದ ಅಪಮಾನಕ್ಕೆ ಸೀತೆಯನ್ನು ಎತ್ತಿತರುವುದೇ ಪ್ರತಿಕಾರವೆಂದು ನಿರ್ಣಯಿಸಿದನು. ಕೂಡಲೇ ಅವನು ಪುಷ್ಪಕವಿಮಾನವೇರಿ ಅವನ ಮಾವ ನಾದ ಮಾರೀಚನಲ್ಲಿಗೆ ಬಂದು ತನ್ನ ಆಲೋಚನೆಯನ್ನು ಹೇಳಿದನು. ಮಾರೀಚನು ಚಿನ್ನದ ಜಿಂಕೆಯಾಗಿ ಸೀತೆಯ ಮುಂದೆ ಸುಳಿದಾಡಬೇಕೆಂದೂ ಅದನ್ನು ಹಿಡಿಯಲು ರಾಮನು ಬಂದಾಗ ಅವನನ್ನು ದೂರಕ್ಕೆ ಒಯ್ಯ ಬೇಕೆಂದೂ ಆಗ ರಾವಣನು ಸೀತೆಯನ್ನೆತ್ತಿಕೊಂಡು ಹೋಗುವನೆಂದೂ ತಿಳಿಸಿದನು. ಮಾರೀಚನು ಹಾಗೆ ಮಾಡುವುದು ಉಚಿತವಲ್ಲವೆಂದು ಎಷ್ಟು ಹೇಳಿದರೂ ರಾವಣನು ಕೇಳಲಿಲ್ಲ. ಅವನು ಮಾರೀಚನನ್ನೇ ಕೊಲ್ಲಲು ಕತ್ತಿಯೆತ್ತಿದನು. ಆಗ ಮಾರೀಚನು ರಾವಣನಿಂದ ಸಾಯುವುದಕ್ಕಿಂತ ರಾಮನ ಬಾಣದಿಂದ ಮಡಿಯುವುದೇ ಪುಣ್ಯವೆಂದು ಭಾವಿಸಿ ರಾವಣನ ಮಾತಿಗೆ ಒಪ್ಪಿದನು.

ಅಂದು ಸೀತೆಯು ಪರ್ಣಶಾಲೆಯ ಹೊರಗೆ ಹೂ ಕೊಯ್ಯುತ್ತ ಒಂದು ಕೊಳದ ದಂಡೆಯಲ್ಲಿ ಬರುತ್ತಿರುವಾಗ ಫಕ್ಕನೆ ಚಿನ್ನದ ಜಿಂಕೆಯನ್ನು ನೋಡಿದಳು. ಅದರ ಸೊಗಸನ್ನು ನೋಡಿ ಆಕೆ ಮೋಹಿತಳಾದಳು. ಗಂಡನಿದ್ದಲ್ಲಿಗೆ ಓಡಿ ಬಂದು ಅದನ್ನು ಹಿಡಿದುಕೊಡಬೇಕೆಂದು ಬೇಡಿಕೊಂ ಡಳು. ಅದು ರಾಕ್ಷಸರ ಮಾಯೆ ಇರಬಹುದೆಂದು ಲಕ್ಷ್ಮಣನು ಸೂಚಿಸಿ ದನು. ಆದರೆ ಸೀತೆ ತನ್ನ ಹಟ ಬಿಡಲಿಲ್ಲ. "ಜೀವಂತವಾಗಿ ಸಿಗದಿದ್ದರೆ ಕೊಂದು ತಾ, ಅದರ ಚರ್ಮವನ್ನಾದರೂ ನೋಡಬಹುದಲ್ಲ" ಎಂದು ಕಾಡಿದಳು. ಆಗ ರಾಮನು, "ಲಕ್ಷ್ಮಣಾ! ನೀನು ಸೀತೆಯೊಂದಿಗೆ ಆಶ್ರಮ ದಲ್ಲಿ ಎಚ್ಚರಿಕೆಯಿಂದಿರು. ನಾನೀ ಸುವರ್ಣಮೃಗವನ್ನು ಹಿಡಿದುತರುವೆನು" ಎಂದು ಹೇಳಿದವನೇ ಬಿಲ್ಲುಬಾಣಗಳನ್ನೆತ್ತಿಕೊಂಡು ಚಿನ್ನದ ಜಿಂಕೆಯನ್ನು ಬೆನ್ನಟ್ಟಿಕೊಂಡು ಹೋದನು.

ಚಿನ್ನದ ಜಿಂಕೆಯು ಒಮ್ಮೆ ಹತ್ತಿರದಲ್ಲೇ ಕೈಗೆ ಸಿಗುವಂತಾದರೆ ಮತ್ತೊಮ್ಮೆ ಹಾರಿ ನೆಗೆದು ಮಾಯವಾಗುತಿತ್ತು. ಹೀಗೆ ಮಾರೀಚನು ಶ್ರೀರಾಮನನ್ನು ಬಹುದೂರದ ವರೆಗೆ ಬರುವಂತೆ ಮಾಡಿದನು. ಮೃಗದ

ಈ ಆಟವನ್ನು ನೋಡಿದ ರಾಮನು ಕೋಪದಿಂದ ಅದರ ಮೇಲೆ ಬಾಣ ಪ್ರಯೋಗ ಮಾಡಿದನು. ರಾಮಬಾಣ ತಾಗಿದೊಡನೆ ಮಾರೀಚನು "ಹಾ ಸೀತೆ! ಹಾ ಲಕ್ಷ್ಮಣಾ" ಎಂದು ಪ್ರಾಣಬಿಟ್ಟನು. ಶ್ರೀರಾಮನು ಹತ್ತಿರ ಹೋಗಿ ನೋಡಿದಾಗ ಜಿಂಕೆಯ ಬದಲು ಮಾರೀಚನು ಸತ್ತುಬಿದ್ದಿರುವುದನ್ನು ಕಂಡನು. ಅಂತೂ ಮಾರೀಚನ ವಧೆಯಾಯಿತಲ್ಲ ಎಂದು ಬಗೆದು ಶ್ರೀರಾಮನು ಆಶ್ರಮದತ್ತ ಬಂದನು. ಬರುವಾಗ ಅವನು ಮನಸ್ಸಿನಲ್ಲಿ ಸೀತಾಲಕ್ಷ್ಮಣರನ್ನೇ ಯೋಚಿಸುತ್ತ ವೇಗವಾಗಿ ಬಂದನು. ಮಾರೀಚನ ಕೂಗಿನಿಂದ ಲಕ್ಷ್ಮಣನು ಸೀತೆಯನ್ನು ಬಿಟ್ಟುಬಂದರೆ ಮಹಾ ಅನರ್ಥವಾದೀತೆಂದು ಅವನು ಬಗೆದನು. ಈ ರೀತಿ ಯೋಚಿಸುತ್ತ ಮತ್ತೂ ವೇಗವಾಗಿ ನಡೆದು ಬಂದನು.

ಆಶ್ರಮದ ಬಳಿಯಲ್ಲಿ ಶ್ರೀರಾಮನನ್ನೇ ಇದಿರುನೋಡುತ್ತ ಆಶೆಯಿಂದ ನಿಂತಿದ್ದ ಸೀತೆಯ ಕಿವಿಗೆ "ಹಾ ಸೀತಾ! ಹಾ ಲಕ್ಷ್ಮಣಾ" ಎಂಬ ಮಾತು ಸರಳಿನಿಂದ ಚುಚ್ಚಿದಂತಾಯಿತು. ಆಕೆ ಬೆಚ್ಚಿಬಿದ್ದಳು. "ಮೈದುನಾ! ಲಕ್ಷ್ಮಣಾ! ಶ್ರೀರಾಮನಿಗೇನೋ ಅಪಾಯ ಸಂಭವಿಸಿತು! ಬೇಗ ಹೋಗು!" ಎಂದು ಲಕ್ಷ್ಮಣನನ್ನು ಕೇಳಿಕೊಂಡಳು. ಆಗ ಲಕ್ಷ್ಮಣನು ಅದು ರಾಕ್ಷಸರ ಮಾಯೆಯೆಂದು ತಿಳಿಸಿ ಶ್ರೀರಾಮಚಂದ್ರನಿಗೆ ಯಾರಿಂದಲೂ ಅಪಾಯ ಉಂಟಾಗದೆಂದು ಜಾನಕಿಯನ್ನು ಸಮಾಧಾನಪಡಿಸಲು ಪ್ರಯತ್ನಿಸಿದನು. ಲಕ್ಷ್ಮಣನು ಶ್ರೀರಾಮನನ್ನು ಹುಡುಕಿಕೊಂಡು ಹೋಗದಿರುವುದನ್ನು ನೋಡಿ ಸೀತೆಯು ಕೋಪದಿಂದ ಕಠಿಣವಾಗಿ ಮಾತನಾಡಿದಳು. "ಲಕ್ಷ್ಮಣಾ! ನೀನು ಅನಾರ್ಯ! ರಾಮನು ವಿಪತ್ತಿನಲ್ಲಿದ್ದರೂ ಸುಮ್ಮನಿರುವೆ. ಈಗ ನಿನ್ನ ದುರಾಲೋಚನೆ ತಿಳಿಯಿತು. ಶ್ರೀರಾಮನು ಅಳಿದ ಮೇಲೆ ನನ್ನನ್ನು ಆಳುವ ಆಶೆಯಿಂದಿರುವೆಯಾ?" ಸೀತೆಯ ಈ ಮಾತನ್ನು ಕೇಳಿ ಲಕ್ಷ್ಮಣನು ಅಲ್ಲಿ ನಿಲ್ಲದಾದನು. ಅವನು ಆಕೆಗೆ ನಮಿಸಿ ಆಶ್ರಮದಿಂದ ಹೊರಗೆ ಬರಬಾರದೆಂದೂ ಎಚ್ಚರಿಕೆಯಿಂದಿರಬೇಕೆಂದೂ ಹೇಳಿ ರಾಮನನ್ನು ಹುಡುಕಿಕೊಂಡು ಹೋದನು.

ಲಕ್ಷ್ಮಣನು ತೆರಳಿದೊಡನೆಯೇ ರಾವಣನು ಸನ್ಯಾಸಿಯ ವೇಷಧರಿಸಿ

ಆಶ್ರಮದ ಬಳಿಗೆ ಬಂದನು. ಸೀತೆಯನ್ನು ನೋಡಿದ ರಾವಣನು ಆಕೆಯ ಸೌಂದರ್ಯಕ್ಕೆ ಮನಸೋತನು. ಮೋಹಗೊಂಡು ಆಕೆಯನ್ನು ಮಾತನಾಡಿಸಿದನು. ಸರಳಮನಸ್ಸಿನ ಸೀತೆಗೆ ರಾವಣನ ಮೋಸ ತಿಳಿಯಲಿಲ್ಲ. ಸೀತೆ ಅವರು ಕಾಡಿಗೆ ಬಂದುದನ್ನು ತಿಳಿಸಿದಳು. ಆಗ ರಾವಣನು ಮುಂದೆ ಬರುತ್ತ ತಾನಾರೆಂಬುದನ್ನು ತಿಳಿಸಿದನು. "ಸುಂದರಿ! ನಾನು ಲಂಕೆಯ ಒಡೆಯನಾದ ರಾವಣನು. ದೇವತೆಗಳೂ ನನಗೆ ದಾಸರು. ನೀನು ನನ್ನ ಪಟ್ಟದ ರಾಣಿಯಾಗು. ಸಾವಿರಾರು ಸ್ತ್ರೀಯರಿಂದ ಸೇವೆಗೊಳ್ಳು" ಎಂದನು. ಹುಲಿಯನ್ನು ಕಂಡು ಹೆದರಿದ ಹಸುವಿನಂತಿದ್ದರೂ ಸೀತಾದೇವಿ ರಾವಣನ ಮಾತು ಕೇಳಿ ಕೋಪದಿಂದ ಅವನನ್ನು ಧಿಕ್ಕರಿಸಿದಳು. ಆದರೆ ರಾವಣನು ಮುಂದೆ ಬಂದವನೇ ಆಕೆಯನ್ನೆತ್ತಿಕೊಂಡು ವಿಮಾನವೇರಿ ಲಂಕೆಯತ್ತ ಸಾಗಿದನು.

"ಹಾ ರಾಮಾ! ಹಾ ಲಕ್ಷ್ಮಣಾ!" ಎಂದು ಸೀತೆ ರೋದಿಸಿದಳು. "ತಾಯಿ ಗೋದಾವರಿ ರಾವಣನು ತನ್ನನ್ನು ಕದ್ದುಕೊಂಡು ಹೋಗುವುದನ್ನು ಶ್ರೀರಾಮಚಂದ್ರನಿಗೆ ತಿಳಿಸು" ಎಂದು ಮುಂತಾಗಿ ಗೋಳಿಟ್ಟಳು. ಆಕೆಯ ಗೋಳನ್ನು ಕೇಳಿ ಜಟಾಯುವು ಹಾರಿ ಬಂದು ರಾವಣನನ್ನು ತಡೆದನು. ಜಟಾಯುವಿಗೂ ರಾವಣನಿಗೂ ಘೋರವಾದ ಯುದ್ಧವಾಯಿತು. ರಾವಣನು ಜಟಾಯುವಿನ ರೆಕ್ಕೆಗಳನ್ನೇ ಕಡಿದು ನೆಲಕ್ಕೆ ಉರುಳಿಸಿದನು. ತನಗಾಗಿ ಸಾಯುತ್ತಿರುವ ಜಟಾಯುವನ್ನು ಕಂಡು ಜಾನಕಿಯು ಮತ್ತಷ್ಟು ದುಃಖಿಸಿದಳು. ರಾವಣನು ದುಃಖಿಸುತ್ತಿರುವ ಸೀತೆಯನ್ನು ಲಂಕೆಗೊಯ್ದನು. ಹೋಗುತ್ತಿರುವಾಗ ಸೀತೆಯು ರಾವಣನನ್ನು ನಿಂದಿಸಿದಳು. "ರಾಮಲಕ್ಷ್ಮಣರಿಬ್ಬರೂ ಇಲ್ಲದ ವೇಳೆಯಲ್ಲಿ ನನ್ನನ್ನು ಕದ್ದುಕೊಂಡು ಹೋಗುವ ನಿನ್ನ ಪರಾಕ್ರಮ ಸುಡಲಿ. ಶ್ರೀರಾಮನು ನಿನ್ನನ್ನು ಕೊಲ್ಲದೆ ಇರಲಾರನು". ರಾವಣನು ಈ ಮಾತಿಗೆ ಕಿವಿಗೊಡಲೇ ಇಲ್ಲ. ವಿಮಾನವು ಹೋಗುತ್ತಿರುವಾಗ ಒಂದು ಕಡೆಯಲ್ಲಿ ಸೀತೆಯು ಕೆಲವು ಕಪಿವೀರರನ್ನು ಕಂಡಳು. ಕೂಡಲೆ ಅವಳು ತನ್ನ ಆಭರಣಗಳನ್ನು ಬಟ್ಟೆಯ ಚಿಂದಿಯಲ್ಲಿ ಕಟ್ಟಿ ಆ ಕಡೆಗೆ ಬಿಸಾಡಿದಳು. ಇದು ರಾವಣನಿಗೆ ತಿಳಿಯಲೇ ಇಲ್ಲ. ಅವನು ದಕ್ಷಿಣಾಭಿಮುಖವಾಗಿ ಹೋಗಿ ಲಂಕೆಯನ್ನು ಸೇರಿದನು. ಅಲ್ಲಿ ಸೀತೆ

ಯನ್ನು ತನ್ನ ಅಂತಃಪುರದಲ್ಲಿರಿಸಿ ಕೆಲವು ರಾಕ್ಷಸಿಯರನ್ನು ಸೀತೆಯ ಪರಿಚರ್ಯೆಗೆ ನೇಮಿಸಿದನು. ಸೀತೆಯೇ ಮನಸ್ಸಿನಲ್ಲಿದ್ದ ರಾವಣನಿಗೆ ಆ ದಿನ ನಿದ್ದೆಯೇ ಬರಲಿಲ್ಲ. ಅವನು ಅಂತಃಪುರಕ್ಕೆ ಬಂದು ಸೀತೆಗೆ ಲಂಕಾರಾಜ್ಯದ ಸಿರಿ ಸೊಬಗುಗಳನ್ನು ತೋರಿಸಿದನು. "ಚಂದ್ರಮುಖಿ! ನನ್ನ ಪಟ್ಟದ ರಾಣಿಯಾಗಿ ಈ ಸಿರಿಸೊಬಗನ್ನು ಅನುಭವಿಸು" ಎಂದು ಕೇಳಿಕೊಂಡನು.

ಸೀತೆಯು ಈ ಮಾತನ್ನು ಕೇಳಿ ಕೋಪಗೊಂಡಳು. "ರಾಮನೇ ನನ್ನ ದೈವ. ಅವನಿಲ್ಲಿಗೆ ಬಂದು ನಿನ್ನನ್ನು ಕೊಲ್ಲದೆ ಬಿಡನು. ನಿನ್ನ ಈ ಸಿರಿಸೊಬಗು ಸುಟ್ಟುಹೋಗಲಿ" ಎಂದು ಶಾಪಕೊಟ್ಟಳು. ಸೀತೆಯ ನುಡಿಯನ್ನು ಕೇಳಿ ರಾವಣನು ಕೋಪಗೊಂಡರೂ ಆವಳ ರೂಪಕ್ಕೆ ಮರುಳಾದ ಅವನು ಅದನ್ನು ತೋರಗೊಡಲಿಲ್ಲ. ಆಕೆಯನ್ನು ಅಶೋಕವನದಲ್ಲಿರಿಸಿ ರಾಕ್ಷಸಿಯರನ್ನು ಕಾವಲಿರಿಸಿದನು.

ಅತ್ತ ಕಾಡಿನಲ್ಲಿ ಶ್ರೀರಾಮನು ಮಾರೀಚನನ್ನು ಕೊಂದು ಆಶ್ರಮದತ್ತ ಬರುತಿದ್ದನು. ಆಗ ಅವನಿಗೆ ಸೀತೆಯದೇ ಯೋಚನೆ. ಸೀತಾಲಕ್ಷ್ಮಣರು ಕ್ಷೇಮದಿಂದಿರುವರೇ ಎಂಬ ಕಳವಳ. ಹೀಗೆ ಯೋಚಿಸುತ್ತ ಬರುವಾಗ ಲಕ್ಷ್ಮಣನು ಎದುರಿಗೆ ಬಂದನು. "ಲಕ್ಷ್ಮಣ, ಸೀತೆ ಕ್ಷೇಮದಿಂದಿರುವಳೇ?" ಎಂದು ರಾಮನು ಕಾತರದಿಂದ ಕೇಳಿದನು. ಲಕ್ಷ್ಮಣನು ನಡೆದ ಸಂಗತಿಯನ್ನು ತಿಳಿಸಿದನು. ಆಕೆ ಕ್ಷೇಮದಿಂದ ಇರಬಹುದೆಂದನು. ಅವರು ಬೇಗ ಬೇಗನೆ ಆಶ್ರಮಕ್ಕೆ ಬಂದರು. ಶ್ರೀರಾಮನು ಸೀತೆಯನ್ನು ಕೂಗಿ ಕರೆದನು. ಆದರೆ ಸೀತೆಯಿಲ್ಲ. ಪರ್ಣಶಾಲೆಯಲ್ಲಿ ಸೀತೆಯಿಲ್ಲ. ಸೀತೆಯ ವಿಹಾರಸ್ಥಾನಗಳನ್ನೆಲ್ಲ ಹುಡುಕಿದರು. ಆಕೆ ಎಲ್ಲಿಯೂ ಇರಲಿಲ್ಲ.

"ಲಕ್ಷ್ಮಣಾ! ಸೀತೆಯನ್ನು ಬಿಟ್ಟು ನೀನು ಬಂದುದೇಕೆ? ಈಗ ಸೀತೆಯನ್ನು ಕಳೆದುಕೊಂಡೆವಲ್ಲಾ!" ಎಂದು ರಾಮನು ದುಃಖಿಸಿದನು. "ಅಣ್ಣಾ! ಅತ್ತಿಗೆಯ ಬಿರುಸುನುಡಿ ಕೇಳಿ ತಡೆಯಲಾಗದೇ ಬಂದುಬಿಟ್ಟೆ" ಎಂದು ಎಲ್ಲವನ್ನೂ ಹೇಳಿ ಸಮಾಧಾನ ಮಾಡಿದನು. ಆದರೆ ರಾಮನಿಗೆ ಸಮಾಧಾನವಾಗಲಿಲ್ಲ. ದುಶ್ಶಕುನಗಳೇ ಆದುವು. ಶ್ರೀರಾಮನಿಗೆ ಸೀತೆಯ ಅಗಲುವಿಕೆಯಿಂದ ಬಹಳ ನೋವಾಯಿತು. ಅವನು "ಸೀತಾ! ಸೀತಾ!" ಎಂದು ಆಶ್ರ

ಮದ ಸುತ್ತು ಓಡಾಡಿದನು. "ನೀವು ಕಂಡಿರೇ? ನೀವು ಕಂಡಿರೇ" ಎಂದು ಗಿಡಮರಗಳಲ್ಲೂ ಹೂಬಳ್ಳಿಗಳಲ್ಲೂ ಹುಚ್ಚನಂತೆ ಕೇಳಿದನು. ಲಕ್ಷ್ಮಣನು ಅಣ್ಣನನ್ನು ಸಮಾಧಾನಪಡಿಸಿದನು. ಶ್ರೀರಾಮನ ದುಃಖವು ಸಂತಾಪ ವಾಯಿತು. ಅವನು ಕೋಪದಿಂದ ಕಿಡಿಕಿಡಿಯಾದನು. ಪ್ರಳಯಕಾಲದ ರುದ್ರನಂತೆ ಗುಡುಗಿದನು. ರಾಕ್ಷಸರನ್ನೆಲ್ಲ ನಾಶಮಾಡುತ್ತೇನೆ ಎಂದು ಗರ್ಜಿಸಿದನು. ಆಗಲೂ ಲಕ್ಷ್ಮಣನು ಅಣ್ಣನನ್ನು ಸಮಾಧಾನಪಡಿಸಿದನು. ಬಳಿಕ ಸೀತೆಯನ್ನು ಹುಡುಕುತ್ತ ಅವರು ಆಶ್ರಮದಿಂದ ಬಹುದೂರ ನಡೆದರು.

ದಾರಿಯಲ್ಲಿ ಅವರಿಗೆ ಜಟಾಯು ಬಿದ್ದಿರುವುದು ಗೋಚರಿಸಿತು. ಜಟಾಯುವು ಕುಗ್ಗಿದ ದನಿಯಲ್ಲಿ ಸೀತೆಯ ವೃತ್ತಾಂತವನ್ನು ತಿಳಿಸಿದನು. "ಶ್ರೀರಾಮಾ! ನಿನ್ನ ಪತ್ನಿಯನ್ನು ದುಷ್ಟನಾದ ರಾವಣನು ಅಪಹರಿಸುತಿದ್ದನು. ಆಗ ನಾನು ಸೀತೆಯನ್ನು ಬಿಡಿಸಲೆಂದು ಅವನೊಡನೆ ಹೋರಾಡಿದೆನು. ನನಗೀ ಗತಿಯಾಯಿತು" ಎಂದು ಹೇಳುತ್ತಿರುವಾಗಲೇ ಆ ಪಕ್ಷಿರಾಜನು ಪ್ರಾಣಬಿಟ್ಟನು. ಪರಮಸ್ನೇಹಿತನಾದ ಜಟಾಯುವಿಗೆ ರಾಮಲಕ್ಷ್ಮಣರು ಅಂತ್ಯಸಂಸ್ಕಾರಮಾಡಿ, ಸೀತೆಯನ್ನು ಅರಸುತ್ತ ಮುನ್ನಡೆದರು.

ರಾಮಲಕ್ಷ್ಮಣರು ಮುಂದೆ ಕ್ರೌಂಚಾರಣ್ಯವನ್ನು ಹೊಕ್ಕು ಸೀತೆಯನ್ನು ಹುಡುಕಿದರು. ಅದೇ ಅರಣ್ಯದಲ್ಲಿ ಅಯೋಮುಖಿ ಎಂಬ ರಾಕ್ಷಸಿ ಇದ್ದಳು. ಆಕೆಯ ದುರ್ವರ್ತನೆಗಾಗಿ ಲಕ್ಷ್ಮಣನು ಅವಳನ್ನು ಸಂಹರಿಸಿದನು. ಅನಂತರ ಅವರು ಮುಂದೆ ಹೋಗುತ್ತಿರುವಾಗ ಜಯಸೂಚಕವಾದ ಶಕುನಗಳಾದರೂ ಭಯಂಕರ ರೂಪದ ರಾಕ್ಷಸನೊಬ್ಬನು ಅವರಿಗೆ ಎದುರಾದನು. ಅವನ ಹೆಸರು ಕಬಂಧನೆಂದು. ಕುತ್ತಿಗೆ ತಲೆಗಳಿಲ್ಲದ ಆ ರಾಕ್ಷಸನಿಗೆ ಹೊಟ್ಟೆ ಎದೆಗಳೇ ಸರ್ವಾಂಗಗಳು. ಅವನು ರಾಮಲಕ್ಷ್ಮಣರನ್ನು ತನ್ನ ಬಲವಾದ ತೋಳುಗಳಿಂದೆತ್ತಿಕೊಂಡು ತಿನ್ನುವೆನೆಂದನು. ಕೂಡಲೇ ರಾಮಲಕ್ಷ್ಮಣರು ಅವನ ತೋಳುಗಳನ್ನು ಕತ್ತರಿಸಿದರು. ಆಗ ಆ ರಾಕ್ಷಸನು ರಾಮಲಕ್ಷ್ಮಣರು ಯಾರೆಂದು ಅವರಿಂದ ತಿಳಿದುಕೊಂಡನು. ಕೂಡಲೇ ಅವನಿಗೆ ಜ್ಞಾನೋದಯವಾಯಿತು. ಅವನು ತನ್ನ ಪೂರ್ವವೃತ್ತಾಂತವನ್ನು ಹೇಳಿದನು. ತನ್ನನ್ನು ಸುಡುವಂತೆ ಕೇಳಿಕೊಂಡನು. ಅವರು ಹಾಗೆಯೇ ಮಾಡಿದರು. ಕೂಡಲೇ

ದಿವ್ಯರೂಪದಿಂದ ಆ ರಾಕ್ಷಸನೆದ್ದು ಬಂದನು. "ರಾಮಾ! ದುಃಖಕಾಲದಲ್ಲಿ ಸ್ನೇಹಿತರಿಂದ ಸಹಾಯ ಪಡೆಯಬೇಕು. ನೀವು ಮುಂದೆ ಹೋದರೆ ನಿಮಗೆ ಋಷ್ಯಮೂಕ ಪರ್ವತ ಸಿಗುವುದು. ಅಲ್ಲಿ ಸುಗ್ರೀವನೆಂಬ ಕಪಿವೀರನಿರುವನು. ಅವನು ನಿನ್ನ ಸ್ನೇಹಿತನು. ಅವನಿಂದ ನಿನ್ನ ಕಾರ್ಯವಾಗುತ್ತದೆ" ಎಂದು ಹೇಳಿ ಸ್ವರ್ಗಲೋಕಕ್ಕೆ ಹೋದನು.

ಕಬಂಧನ ಮಾತಿನಿಂದ ರಾಮಲಕ್ಷ್ಮಣರಿಗೆ ಸಂತೋಷವಾಯಿತು. ಅವರು ಅವನು ಸೂಚಿಸಿದ ದಾರಿಹಿಡಿದು ಸಾಗಿದರು. ಅವರು ಪಂಪಾ ಸರೋವರದ ಪಶ್ಚಿಮ ದಡವನ್ನು ಸೇರಿ ಅಲ್ಲೇ ಇರುವ ಆಶ್ರಮಕ್ಕೆ ಹೋದರು. ಅದು ಮತಂಗಋಷಿಗಳ ಆಶ್ರಮ. ಅಲ್ಲಿ ಶಬರಿಯು ರಾಮನಿಗಾಗಿ ತಪಸ್ಸು ಮಾಡುತಿದ್ದಳು. ರಾಮನೇ ತನ್ನಲ್ಲಿಗೆ ಬಂದನೆಂದು ಶಬರಿ ಆನಂದದಿಂದ ಹಿಗ್ಗಿ ಅವರನ್ನು ವಂದಿಸಿ ಸ್ವಾಗತಿಸಿದಳು. ಅವನಿಗಾಗಿ ಸಂಗ್ರಹಿಸಿಟ್ಟಿದ್ದ ಹಣ್ಣುಗಳನ್ನು ಇತ್ತು ಉಪಚರಿಸಿದಳು. "ರಾಮಾ! ನಿನ್ನ ದರ್ಶನಕ್ಕಾಗಿ ಕಾದಿದ್ದೆ. ಈಗ ನನ್ನ ಜನ್ಮಫಲ ಸಿದ್ಧಿಸಿತು" ಎಂದು ಹೇಳಿ ಅವರಿಗೆ ಮತಂಗಾಶ್ರಮವನ್ನೆಲ್ಲ ತೋರಿಸಿದಳು. ಅಣ್ಣತಮ್ಮಂದಿರಿಬ್ಬರೂ ಆ ಋಷಿಯ ಪ್ರಭಾವವನ್ನು ಕಂಡು ಬೆರಗಾದರು.

"ರಾಮಾ! ನನ್ನ ಜನ್ಮ ಸಾರ್ಥಕವಾಯಿತು! ಈ ದೇಹವನ್ನು ಬಿಡಲು ನನಗೆ ಅಪ್ಪಣೆಕೊಡು" ಎಂದು ಶಬರಿಯು ಶ್ರೀರಾಮನನ್ನು ಬೇಡಿಕೊಂಡಳು. ಶ್ರೀರಾಮನ ಅಪ್ಪಣೆಯಂತೆ ಆಕೆ ತನ್ನ ದೇಹವನ್ನು ಅಗ್ನಿಗೆ ಒಪ್ಪಿಸಿ ತಾನು ಸ್ವರ್ಗಲೋಕಕ್ಕೆ ಹೋದಳು. ಈ ಅದ್ಭುತವನ್ನು ಕಂಡು ರಾಮಲಕ್ಷ್ಮಣರಿಗೆ ಸೋಜಿಗವಾಯಿತು. ಅವರು ಕಬಂಧನ ಮಾತನ್ನು ನೆನೆದು ಋಷ್ಯಮೂಕ ಪರ್ವತದತ್ತ ನಡೆದರು.

## ೪. ಕಿಷ್ಕಿಂಧಾಕಾಂಡ.

ಸೀತೆಯನ್ನು ಹುಡುಕುತ್ತ ಮುನ್ನಡೆದ ರಾಮಲಕ್ಷ್ಮಣರು ಋಷ್ಯಮೂಕ ಪರ್ವತದ ಹತ್ತಿರಕ್ಕೆ ಬಂದರು. ಆ ಪರ್ವತದ ಬಳಿಯಲ್ಲೇ ಪಂಪಾ ಸರೋವರ. ಸೊಗಸಾದ ಆ ಸರೋವರವನ್ನು ನೋಡಿದೊಡನೆ ರಾಮನಿಗೆ ಸೀತೆಯು

ನೆನಪಾಯಿತು. ಅವನ ಕಣ್ಣುಗಳು ಒದ್ದೆಯಾದುವು. ಅಲ್ಲಿನ ಸರೋವರ, ಅದನ್ನು ಬಳಸಿರುವ ವನದಶೋಭೆ ಇವನ್ನು ಕಂಡು ಶ್ರೀರಾಮನು ಸೀತೆಯ ನ್ನಗಲಿದ ದುಃಖದಿಂದ ಕುದಿಯುತ್ತಿದ್ದನು. ಅದನ್ನು ತಿಳಿದು ಲಕ್ಷ್ಮಣನು ಅವ ನನ್ನು ಸಮಾಧಾನಗೊಳಿಸಿದನು. ತಮ್ಮನಿಂದ ಸಮಾಧಾನಗೊಂಡ ರಾಮನು ಮುಂದೆ ನಡೆದನು. ದುಃಖದಿಂದ ನಡೆಯುತ್ತಿರುವ ಅಣ್ಣನನ್ನು ಹಿಂಬಾಲಿ ಸುತ್ತ ಲಕ್ಷ್ಮಣನು ಎಚ್ಚರಿಕೆಯಿಂದ ನಡೆದನು.

ಋಷ್ಯಮೂಕ ಪರ್ವತದ ಶಿಖರದಲ್ಲಿ ಸುಗ್ರೀವನೆಂಬ ಕಪಿವೀರನು ತನ್ನ ಮಂತ್ರಿಗಳೊಂದಿಗೆ ವಾಸವಾಗಿದ್ದನು. ಕಿಷ್ಕಿಂಧೆಯ ರಾಜನಾದ ವಾಲಿಯ ತಮ್ಮನೇ ಸುಗ್ರೀವನು. ಅಣ್ಣನ ಭಯಕ್ಕಾಗಿ ಅವನು ಆ ಪರ್ವತದಲ್ಲಿ ವಾಸವಾಗಿದ್ದನು. ಮುನಿವೇಷದಲ್ಲಿ ಪರ್ವತದ ಸಮೀಪಕ್ಕೆ ಬರುತ್ತಿರುವ ರಾಮಲಕ್ಷ್ಮಣರನ್ನು ಈ ಕಪಿವೀರರು ಪರ್ವತದ ಶಿಖರದಿಂದಲೇ ಕಂಡುಕೊಂ ಡರು. ಕೂಡಲೇ ಸುಗ್ರೀವನು ಹನುಮಂತನನ್ನು ಕರೆದು ಹೊಸಬರ ಗುಟ್ಟ ನ್ನರಿತು ಬಾ ಎಂದು ಕಳುಹಿಸಿದನು. ಆ ಹೊಸಬರು ವಾಲಿಯ ಗೂಢಚಾರ ರಾಗಿರಬಹುದೆಂದು ಆ ಕಪಿವೀರರು ಸಂದೇಹ ತಾಳಿದರು. ಹನುಮಂತನು ರಾಮಲಕ್ಷ್ಮಣರಿರುವಲ್ಲಿಗೆ ಓಡಿಬಂದನು. ವಿನಯದಿಂದ ಅವರಿಬ್ಬರಿಗೂ ನಮ ಸ್ಕರಿಸಿದನು.

"ತಾಪಸವೇಷದಲ್ಲಿರುವ ವೀರಕುಮಾರರೇ ನೀವು ಯಾರು? ಋಷ್ಯ ಮೂಕದಲ್ಲಿ ಸುಗ್ರೀವನು ನಿಮ್ಮ ಸ್ನೇಹವನ್ನು ಬಯಸುವನು. ನಾನು ಅವನ ಮಂತ್ರಿಗಳಲ್ಲಿ ಒಬ್ಬನು. ನನ್ನ ಹೆಸರು ಹನುಮಂತ".

ಹನುಮಂತನ ಮಾತುಗಳನ್ನು ಕೇಳಿ ರಾಮಲಕ್ಷ್ಮಣರಿಗೆ ಸಂತೋಷ ವಾಯಿತು. ತಾವು ಹುಡುಕಿಕೊಂಡು ಬಂದ ಸುಗ್ರೀವನೇ ಸ್ನೇಹಾಭಿಲಾಷಿ ಯಾಗಿ ತನ್ನ ಮಂತ್ರಿಯನ್ನು ಕಳುಹಿಸಿರುವುದು ತಮ್ಮ ಕಾರ್ಯಕ್ಕೆ ಶುಭ ಸೂಚನೆಯೆಂದು ರಾಮನು ಮನಗಂಡನು. ಹನುಮಂತನ ನಡೆನುಡಿಗಳಿಗೂ ಮೆಚ್ಚಿದನು. ರಾಮನ ಸೂಚನೆಯಂತೆ ಲಕ್ಷ್ಮಣನು ಅವರ ವಿಚಾರವನ್ನು ತಿಳಿಸಿದನು. "ನಾವು ಅಯೋಧ್ಯೆಯ ಅರಸನಾದ ದಶರಥನ ಮಕ್ಕಳು. ಈ ಶ್ರೀರಾಮಚಂದ್ರನು ನನ್ನ ಅಣ್ಣನು. ಅವನು ತಂದೆಯ ಮಾತು ಸಲ್ಲಿಸಲು

ನಾಡಿಗೆ ಬಂದಿರುವನು. ನನ್ನ ಹೆಸರು ಲಕ್ಷ್ಮಣ. ನಮ್ಮ ಸಹೋದರರಿಬ್ಬರು ಕಾಡಿನಲ್ಲಿದ್ದಾರೆ. ನಾವು ಕಾಡಿನಲ್ಲಿ ಸಂಚರಿಸುತ್ತಿರುವಾಗ ಒಂದು ದಿನ ನಾವಿಲ್ಲದ ವೇಳೆಯಲ್ಲಿ ರಾವಣನೆಂಬ ದುಷ್ಟರಾಕ್ಷಸನು ಸೀತೆಯನ್ನು ಅಪಹರಿಸಿದನು. ಸೀತೆಯನ್ನು ಹುಡುಕಿಸುವ ಕೆಲಸದಲ್ಲಿ ಸುಗ್ರೀವನೇ ತಕ್ಕವನೆಂದು ನಮಗೆ ಕಬಂಧನು ತಿಳಿಸಿದ್ದಾನೆ. ಅದರಂತೆ ನಾವು ಸುಗ್ರೀವನಿರುವ ಈ ಋಷ್ಯಮೂಕ ಪರ್ವತದ ತಪ್ಪಲಿಗೆ ಬಂದುದು”.

ಲಕ್ಷ್ಮಣನ ಮಾತುಕೇಳಿ ಹನುಮಂತನಿಗೆ ಆನಂದವಾಯಿತು. ಅವನೂ ಸುಗ್ರೀವನ ಸುದ್ದಿಯನ್ನು ಸ್ವಲ್ಪದರಲ್ಲೇ ಅವರಿಗೆ ತಿಳಿಸಿ ಅವರನ್ನು ತನ್ನ ಹೆಗಲಲ್ಲೇರಿಸಿಕೊಂಡು ಸುಗ್ರೀವನಲ್ಲಿಗೆ ಬಂದನು. ಪರಸ್ಪರ ಪರಿಚಯಗಳಾದ ಮೇಲೆ ಶ್ರೀರಾಮ ಸುಗ್ರೀವರು ಆಂಜನೇಯನು ಸಿದ್ಧಗೊಳಿಸಿದ ಅಗ್ನಿಯ ಮುಂದೆ ಅಗ್ನಿಸಾಕ್ಷಿಯಾಗಿ ತಮ್ಮ ಸ್ನೇಹವನ್ನು ದೃಢಪಡಿಸಿಕೊಂಡರು. ಅನಂತರ ಸುಗ್ರೀವನು ಸೀತೆಯನ್ನು ರಾವಣನು ಅಪಹರಿಸಿಕೊಂಡು ಹೋಗುತ್ತಿರುವಾಗ ಆಕೆಯೆಸೆದ ಆಭರಣಗಳನ್ನು ರಾಮನಿಗೊಪ್ಪಿಸಿದನು. ಅದನ್ನು ಕಂಡು ಶ್ರೀರಾಮನು ಕಂಬನಿದುಂಬಿದನು. ಅದನ್ನು ಕಂಡು ಸುಗ್ರೀವನಿಗೂ ದುಃಖವಾಯಿತು. ಅವನು ರಾಮನೊಡನೆ ತಾನು ರಾವಣನಿರುವ ಸ್ಥಳವನ್ನು ಅರಿಯದಿದ್ದರೂ ಆಕೆಯನ್ನು ಹುಡುಕಿಸಿ ಮರಳಿ ಪಡೆಯುವ ಪ್ರಯತ್ನಮಾಡುವೆನೆಂದು ಪ್ರತಿಜ್ಞೆ ಮಾಡಿದನು. ಸುಗ್ರೀವನ ಮಾತುಗಳಿಂದ ರಾಮನು ಸಮಾಧಾನಗೊಂಡನು.

ಅನಂತರ ಸುಗ್ರೀವನು ಅವನ ಅಣ್ಣನ ವಿಚಾರವನ್ನು ತಿಳಿಸಿದನು. ಕಿಷ್ಕಿಂಧೆಯಲ್ಲಿ ವಾಲಿ ಸುಗ್ರೀವರೆಂಬ ಈ ಅಣ್ಣತಮ್ಮಂದಿರು ಋಕ್ಷರಜಸ್ಸು ಎಂಬ ಕಪಿರಾಜನ ಪ್ರೀತಿಯ ಮಕ್ಕಳು. ತಂದೆಯು ಕಾಲವಾದ ಮೇಲೆ ವಾಲಿಯು ರಾಜನಾದನು. ಸುಗ್ರೀವನು ಯುವರಾಜನಾದನು. ಸಹೋದರರು ಪ್ರೀತಿಯಿಂದ ಇದ್ದರು. ಒಮ್ಮೆ ದುಂದುಭಿ ಎಂಬ ದಾನವನು ಕಿಷ್ಕಿಂಧೆಯ ಹೆಬ್ಬಾಲಿಗೆ ಬಂದು ವಾಲಿಯನ್ನು ಯುದ್ಧಕ್ಕೆ ಕರೆದನು. ಅಣ್ಣತಮ್ಮಂದಿರಿಬ್ಬರೂ ಅವನನ್ನು ಅಟ್ಟಿಕೊಂಡು ಹೋದರು. ಓಡಿಹೋಗುತ್ತಿದ್ದ ರಾಕ್ಷಸನು ದುರ್ಗಮವಾದ ಬಿಲದೊಳಗೆ ನುಸುಳಿದನು. ವಾಲಿಯು ತಮ್ಮನನ್ನು ಹೊರಗೆ ನಿಲ್ಲಲು ಹೇಳಿ ತಾನು ಬಿಲದೊಳಗೆ ನಡೆದನು. ಅದಾಗಿ ಒಂದು

ವರ್ಷವಾದರೂ ವಾಲಿ ಮರಳಲಿಲ್ಲ. ಬಿಲದಿಂದ ರಕ್ತಮಾಂಸಗಳು ಹೊರ ಬಂದುವು. ವಾಲಿಗೆ ಕೇಡಾಯಿತೆಂದು ಯೋಚಿಸಿ ಸುಗ್ರೀವನು ಬಿಲದ ಬಾಯಿಗೆ ಬಲವಾದ ಕಲ್ಲನ್ನಿಟ್ಟು ಕಿಷ್ಕಿಂಧೆಯನ್ನು ಸೇರಿದನು. ಮಂತ್ರಿಗಳು ಈ ವಾರ್ತೆಯನ್ನು ಕೇಳಿ ಸುಗ್ರೀವನನ್ನೇ ರಾಜನೆಂದು ಒಪ್ಪಿಸಿದರು. ಆದರೆ ಕೆಲ ಸಮಯದಲ್ಲೇ ವಾಲಿಯು ಬಿಲದ ಬಾಗಿಲಿಗೆ ಬಂದನು. ಕಲ್ಲನ್ನೊದೆದು ಹೊರಗೆ ಬಂದನು. ಹೊರಗೆ ಬಂದವನೇ ಕಿಷ್ಕಿಂಧೆಗೆ ಧಾವಿಸಿ ಸುಗ್ರೀವನನ್ನು ಹೊಡೆಯತೊಡಗಿದನು. ಸುಗ್ರೀವನು ನಿಜಸಂಗತಿಯನ್ನು ಹೇಳಿಕೊಂಡು ಬೇಡಿಕೊಂಡರೂ ಅವನ ಕೋಪವಿಳಿಯಲಿಲ್ಲ. ಅವನು ಸುಗ್ರೀವನನ್ನು ರಾಜ್ಯದಿಂದ ಓಡಿಸಿ ಅವನ ಪತ್ನಿಯಾದ ರುಮೆಯನ್ನು ತನ್ನ ಅಂತಃಪುರದಲ್ಲಿರಿಸಿಕೊಂಡನು. ಮತಂಗ ಋಷಿಯ ಶಾಪಕ್ಕೆ ಹೆದರಿ ವಾಲಿಯು ಋಷ್ಯಮೂಕ ಪರ್ವತಕ್ಕೆ ಕಾಲಿರಿಸದಿರುವುದರಿಂದ ಸುಗ್ರೀವನು ಆ ಪರ್ವತದಲ್ಲೇ ತಿರುಗುತಿದ್ದನು.

ಸುಗ್ರೀವನಿಂದ ವಾಲಿಯ ವೃತ್ತಾಂತವನ್ನೂ ವಿಚಾರವನ್ನೂ ತಿಳಿದ ರಾಮನು, ವಾಲಿಯನ್ನು ಸಂಹರಿಸಿ ಸುಗ್ರೀವನನ್ನು ಕಿಷ್ಕಿಂಧೆಯ ರಾಜನಾಗಿ ಮಾಡುವೆನೆಂದೂ ಅವನು ಅನಂತರ ಪತ್ನಿಯೊಂದಿಗೆ ಸುಖವಾಗಿರಬಹುದೆಂದೂ ತಿಳಿಸಿದನು. ರಾಮನು ಮೊದಲು ವಾಲಿಯ ಸಂಹಾರಮಾಡುವುದೆಂದೂ ಅನಂತರ ಸುಗ್ರೀವನು ಸೀತೆಯನ್ನು ಹುಡುಕಿಸಬೇಕೆಂದೂ ಅವರೊಳಗೆ ಒಪ್ಪಂದವಾಯಿತು. ವಾಲಿಯನ್ನು ಕೊಲ್ಲುವ ವಿಚಾರದಲ್ಲಿ ಸುಗ್ರೀವನಿಗೆ ನಂಬುಗೆಯುಂಟಾಗುವಂತೆ ರಾಮನು ದುಂದುಭಿಯ ದೇಹವನ್ನು ಹತ್ತುಗಾವುದ ಎತ್ತರಕ್ಕೆ ಕಾಲಿನಿಂದ ಮೆಟ್ಟಿ ಚಿಮ್ಮಿದನು. ಸಪ್ತಸಾಲ ವೃಕ್ಷಗಳನ್ನು ಒಂದೇ ಬಾಣದಿಂದ ಉರುಳಿಸಿದನು. ಇದನ್ನು ನೋಡಿ ಸುಗ್ರೀವನಿಗೆ ರಾಮನ ಪರಾಕ್ರಮದಲ್ಲಿ ಭರವಸೆಯುಂಟಾಯಿತು.

ರಾಮಲಕ್ಷ್ಮಣರೊಂದಿಗೆ ಸುಗ್ರೀವನು ಕಿಷ್ಕಿಂಧೆಗೆ ತೆರಳಿ ವಾಲಿಯನ್ನು ಯುದ್ಧಕ್ಕೆ ಕೂಗಿ ಕರೆದನು. ರಾಮಲಕ್ಷ್ಮಣರು ಬಳಿಯಲ್ಲೇ ಮರವೆಡೆಯಲ್ಲಿ ಅವಿತು ನಿಂತರು. ಸುಗ್ರೀವನ ಸ್ವರವನ್ನು ಕೇಳಿ ಸಿಟ್ಟುಗೊಂಡು ವಾಲಿಯು ಬಂದನು. ಅವನು ಸುಗ್ರೀವನ ಸೊಕ್ಕನ್ನು ಮುರಿಯುವೆನೆಂದು ಬಲವಾಗಿ

ಹೊಡೆದನು. ಒಬ್ಬರಿಗೊಬ್ಬರು ಒಂದೇ ರೀತಿಯಾಗಿದ್ದ ವಾಲಿಸುಗ್ರೀವರನ್ನು ಪ್ರತ್ಯೇಕಿಸಿ ತಿಳಿಯುವುದು ರಾಮನಿಗೆ ಕಷ್ಟವಾಯಿತು. ಆದರಿಂದಾಗಿ ರಾಮನು ಬೆರಗಾಗಿ ಅವರ ಕಾದಾಟವನ್ನು ನೋಡಿಯೇ ನಿಂತನು. ಪೆಟ್ಟು ತಿಂದು ಹಣ್ಣಾದ ಸುಗ್ರೀವನು ಕೊನೆಗೆ ವಾಲಿಯಿಂದ ತಪ್ಪಿಸಿಕೊಂಡು ಹಿಂದಕ್ಕೆ ಓಡಿದನು. ವಾಲಿ ಬೆನ್ನಟ್ಟದೆ ಬಿಡಲಿಲ್ಲ. ಸುಗ್ರೀವನು ಋಷ್ಯಮೂಕ ಪರ್ವತವನ್ನೇರಿ ಬದುಕಿದೆನೆಂದು ನಿಂತನು. ವಾಲಿಯ ಗುದ್ದಿನಿಂದ ನೋವೂ ರಾಮನು ವಾಲಿಯನ್ನು ಸಂಹರಿಸದಿರುವುದರಿಂದ ಕೋಪವೂ ಒಂದೇ ವೇಳೆಯಲ್ಲಿ ಸುಗ್ರೀವನಿಗೆ ಉಂಟಾಯಿತು. ಅಷ್ಟರಲ್ಲಿ ರಾಮಲಕ್ಷ್ಮಣರು ಅಲ್ಲಿಗೆ ಬಂದರು. ಸುಗ್ರೀವನು ಅವರನ್ನು ನೋಡದೆ ಬೇರೆಡೆಗೆ ಮೋರೆ ತಿರುಗಿಸಿದನು. ಶ್ರೀರಾಮನು ಆಗ ಸುಗ್ರೀವನ ಹತ್ತಿರ ಬಂದು ಅವನ ಮೈದಡವಿ ಮಾತನಾಡಿಸಿದನು. ವಾಲಿಸುಗ್ರೀವರೊಳಗಿನ ಸಾಮ್ಯದಿಂದ ತಾನು ಬಾಣಪ್ರಯೋಗಿಸಲು ಅಂಜಿದೆನೆಂದು ಸಮಾಧಾನಪಡಿಸಿದನು. ಸುಗ್ರೀವನನ್ನು ಗುರುತಿಸಲು ಅನುಕೂಲವಾಗುವಂತೆ ರಾಮನು ಅವನಿಗೆ ಗಜಪುಷ್ಪದ ಮಾಲೆಯನ್ನು ಹಾಕಿಸಿದನು.

ವಿಜಯಮಾಲೆಯಂತಿರುವ ಗಜಪುಷ್ಪಮಾಲೆಯನ್ನು ಧರಿಸಿ ಸುಗ್ರೀವನು ಉತ್ಸಾಹದಿಂದ ಅಣ್ಣನನ್ನು ಕಾಳಗಕ್ಕೆ ಕರೆಯಲು ಹೋದನು. ಸುಗ್ರೀವನ ಘರ್ಜನೆಯನ್ನು ಕೇಳಿ ವಾಲಿಯು ಕೋಪದಿಂದ ಕಿಡಿಕಿಡಿಯಾಗಿ ಹೊರಟನು. ಆಗ ಅವನ ಪತ್ನಿಯಾದ ತಾರೆಯು ತನಗಾದ ಅಪಶಕುನಗಳನ್ನು ನಂಬಿ ಅವನನ್ನು ಯುದ್ಧಕ್ಕೆ ಹೋಗಬಾರದೆಂದು ತಡೆದಳು. ಆಕೆ ಎಷ್ಟು ಹೇಳಿದರೂ ವಾಲಿಯು ಕೇಳಲೇ ಇಲ್ಲ. ಕೊನೆಗೆ ಅವಳು ತನ್ನ ಪತಿಗೆ ಜಯವನ್ನು ಕೋರಿ ಕಣ್ಣೀರಿನಲ್ಲೇ ಬೀಳ್ಕೊಟ್ಟಳು. ವಾಲಿಯು ಕ್ಷಣದಲ್ಲೇ ರಾಜಧಾನಿಯ ಹೊರಭಾಗಕ್ಕೆ ಬಂದನು. ಮತ್ತೆ ಅಣ್ಣತಮ್ಮಂದಿರೊಳಗೆ ಕಾದಾಟ ಪ್ರಾರಂಭವಾಯಿತು. ಆಗ ಮರದ ಮರೆಯಲ್ಲಿ ನಿಂತ ಶ್ರೀರಾಮನು ವಾಲಿಗೆ ಗುರಿಯಿಟ್ಟು ಬಾಣಬಿಟ್ಟನು. ರಾಮಬಾಣ ತಾಗಿ ವಾಲಿಯು ಉರುಳಿ ಕೆಳಗೆ ಬಿದ್ದನು.

ತನ್ನನ್ನು ಈ ರೀತಿಯಲ್ಲಿ ಮೋಸದಿಂದ ಇರಿದು ಕೆಡವಿದವರಾರೆಂದು

ವಾಲಿಯು ಅತ್ತಿತ್ತ ಹೊರಳುವಾಗಲೇ ರಾಮಲಕ್ಷ್ಮಣರು ಅಲ್ಲಿಗೆ ಬಂದರು. ಅವರನ್ನು ಕಂಡು ವಾಲಿಗೆ ತಿರಸ್ಕಾರವೂ ಕೋಪವೂ ಉಂಟಾಯಿತು. ವಾಲಿಯು ರಾಮನೊಡನೆ ತನ್ನನ್ನು ಆ ರೀತಿಯಲ್ಲಿ ಇರಿದುದೇಕೆಂದು ವಿಚಾರಿಸಿದನು. "ರಾಮಚಂದ್ರ ನೀನು ಗುಣವಂತನೆಂದು ಕೇಳಿದ್ದೆ. ಆದರೆ ಈಗ ನಿನ್ನ ಕೃತ್ಯದಿಂದ ನೀನು ಅಧಾರ್ಮಿಕನೆಂದು ತೋರುತ್ತಿ. ನನಗೂ ನಿನಗೂ ಯಾವ ರೀತಿಯ ವೈರವೂ ಇರಲಿಲ್ಲ. ಮತ್ತೇಕೆ ಹೀಗೆ ಮಾಡಿದೆ? ನನ್ನೆದುರು ನಿಂತು ವೀರನಂತೆ ನಿನ್ನ ಪರಾಕ್ರಮವನ್ನು ತೋರಿಸಬಹುದಿತ್ತು. ವೀರರಿಗೆ ಉಚಿತವಲ್ಲದ ಕಾರ್ಯವನ್ನು ಹೇಡಿಯಂತೆ ಮಾಡಿದೆಯಲ್ಲ?"

"ಕಪಿವೀರ, ನನ್ನ ವರ್ತನೆಯು ಧರ್ಮವೇ ಆಗಿದೆ. ತಮ್ಮನನ್ನು ದೇಶದಿಂದ ಹೊರಡಿಸಿ ಅವನ ಹೆಂಡತಿಯೊಡನೆ ಸುಖಪಡುವುದು ಪಾಪ. ಅದಕ್ಕಾಗಿ ನಿನ್ನನ್ನು ಇರಿದೆನು. ಪಶುಕೋಟಿಯಲ್ಲಿ ಸೇರಿದ ನಿನ್ನನ್ನು ಮರೆಯಲ್ಲಿ ನಿಂತು ಕೊಲ್ಲುವುದೇ ರಾಜಧರ್ಮವು. ಪಾಪಕಾರ್ಯಗಳನ್ನು ಮಾಡುವವನಿಗೆ ಶಿಕ್ಷೆಯು ತಪ್ಪಿದುದಲ್ಲ" ಎಂದು ರಾಮನು ವಾಲಿಗೆ ಉತ್ತರವಿತ್ತನು.

ರಾಮನ ಬಾಣದಿಂದ ಪ್ರಾಣಬಿಡುವಂತಾದ ವಾಲಿಯು ತನ್ನೊಳಗೇ ಸಮಾಧಾನಗೊಂಡನು. ದುಃಖದಿಂದ ಬಳಿಯಲ್ಲೇ ನಿಂತಿದ್ದ ಸುಗ್ರೀವನನ್ನು ಹತ್ತಿರ ಕರೆದುಕೊಂಡು, ತನ್ನ ಹೆಂಡತಿ ಮಕ್ಕಳನ್ನೂ ಪ್ರಜೆಗಳನ್ನೂ ರಕ್ಷಿಸು; ಧರ್ಮದಿಂದ ರಾಜ್ಯಭಾರ ಮಾಡು ಎಂದನು. ರಾಮನೊಡನೆ ತನಗೆ ಕೋಪವಿಲ್ಲವೆಂದೂ ತನ್ನ ಪಾಪದಿಂದ ಹೀಗಾಯಿತೆಂದೂ ತಿಳಿಸಿದನು. ಅಷ್ಟು ಹೊತ್ತಿಗೆ ಪತಿಯ ದುರಂತದ ಮಾತುಕೇಳಿ ತಾರೆಯು ಅಳುತ್ತ ಅಲ್ಲಿಗೆ ಬಂದಳು. ಬಂದವಳೇ ವಾಲಿಯ ಮೇಲೆ ಬಿದ್ದು ಗೋಳಾಡಿದಳು. ಗಂಡನನ್ನು ಮಾತನಾಡಿಸಿದಳು. ತನಗಿನ್ನಾರು ಗತಿಯೆಂದು ಮೊರೆಯಿಟ್ಟಳು. ಕುಂದುತ್ತಿರುವ ಶಕ್ತಿಯನ್ನೆಲ್ಲ ಒಟ್ಟು ಸೇರಿಸಿ ವಾಲಿ ಕೊನೆಯ ಮಾತನ್ನು ಹೇಳಿದನು. "ವತ್ಸ ಸುಗ್ರೀವ! ನನ್ನನ್ನು ಕ್ಷಮಿಸು. ಈ ಅಂಗದನನ್ನು ನಿನ್ನ ಮಗನೆಂದು ತಿಳಿದು ನಡೆಸಿಕೊ. ರಾಮನ ಕಾರ್ಯದಲ್ಲಿ ನೆರವಾಗು. ನನ್ನ ದೇಹದ ಕಾಂತಿ ಕಳೆವ ಮೊದಲೇ ಈ ಬಂಗಾರದ ಸರವನ್ನು ಧರಿಸಿಕೋ". ಅಂಗದನನ್ನು ಕರೆದು ಅವನಿಗೂ ಹಿತವಚನ ಹೇಳಿದನು. ಹೀಗೆ ಮಾತನಾಡುತ್ತಿರು

ವಾಗಲೇ ವಾಲಿಯು ನೋವಿನಿಂದ ಕಣ್ಣುಮುಚ್ಚಿದನು. ದೇಹದಿಂದ ಪ್ರಾಣವು ಹಾರಿಹೋಯಿತು. ಅಲ್ಲಿದ್ದವರೆಲ್ಲರೂ ಗೋಳೋ ಎಂದು ಅತ್ತರು.

ಹೀಗೆ ಅಳುತ್ತಿರುವ ವಾಲಿಯ ಬಂಧುಗಳನ್ನು ರಾಮನು ಸಂತೈಸಿದನು. ಸುಗ್ರೀವನು ಅಣ್ಣನ ಮರಣದಿಂದ ಬಹಳವಾಗಿ ಸಂಕಟಗೊಂಡನು. ಆಗ ರಾಮನು ಅವನಿಗೆ ಧೈರ್ಯಹೇಳಿ ಮುಂದಿನ ಸಂಸ್ಕಾರವಾಡಲು ಹೇಳಿದನು. ಆದರಂತೆ ಸುಗ್ರೀವನು ವಾನರರೊಂದಿಗೆ ವಾಲಿಯ ದೇಹದ ಸಂಸ್ಕಾರ ಮಾಡಿ ಸಿದನು. ಆ ಮೇಲೆ ಕಿಷ್ಕಿಂಧೆಯನ್ನು ಸೇರಿ ರಾಜನಾದನು.

ಸುಗ್ರೀವನು ರಾಜನಾಗಿ ಕಿಷ್ಕಿಂಧೆಯಲ್ಲಿರಲು ರಾಮಲಕ್ಷ್ಮಣರು ತಮ್ಮ ಪ್ರತಿಜ್ಞೆಯಂತೆ ಪಟ್ಟಣವನ್ನಾಗಲೀ ಗ್ರಾಮವನ್ನಾಗಲೀ ಸೇರದೆ ಸಮೀಪದಲ್ಲಿನ ಪ್ರಸ್ರವಣ ಪರ್ವತದಲ್ಲಿ ವಾಸಿಸತೊಡಗಿದರು. ಅಷ್ಟರಲ್ಲಿ ಮಳೆಗಾಲ ಪ್ರಾರಂಭ ವಾಯಿತು. ಮಳೆಗಾಲದ ವನಶೋಭೆಯನ್ನು ನೋಡುವಾಗಲೂ ರಾಮನಿಗೆ ಸೀತೆಯ ನೆನಪಾಗದಿರಲಿಲ್ಲ. ವರ್ಷಾಕಾಲವು ಕಳೆದು ಶರತ್ಕಾಲವು ಬಂತು. ಆಗ ಹನುಮಂತನು ಸುಗ್ರೀವನನ್ನು ಎಚ್ಚರಿಸಿದನು. ಶ್ರೀರಾಮಕಾರ್ಯದಲ್ಲಿ ತೊಡಗಲು ಸಮಯ ಬಂದಿದೆ ಎಂದನು. ಆದರೆ ಸುಗ್ರೀವನು ಅವನ ಮಾ ತನ್ನು ಕೇಳದವನಂತೆ ಮಾಡಿದನು. ತಾರೆರುಮೆಯರೊಂದಿಗೆ ಸುಖದಿಂದ ಇರುವ ಅವನಿಗೆ ಬೇರೆ ಕೆಲಸವೇ ಬೇಡವಾಯಿತು. ಅತ್ತ ರಾಮನು ಶರತ್ಕಾ ಲದ ಬೆಳದಿಂಗಳಲ್ಲಿ ಎಷ್ಟೋ ಸಲ ಸೀತೆಯನ್ನು ನೆನೆದನು. ಹಿಂದಿನ ಸುಖದ ರಾತ್ರಿಗಳು ಅವನ ದೇಹವನ್ನು ನೋಯಿಸಿದುವು. ಅಣ್ಣನು ಈ ರೀತಿ ಕೊರಗುವುದನ್ನು ಕಂಡು ಲಕ್ಷ್ಮಣನೂ ಒಳಗೊಳಗೇ ದುಃಖಪಟ್ಟನು. ಆದರೆ ಅದನ್ನು ತೋರಗೊಡದೆ ಅವನ ಸೇವೆಯಲ್ಲೇ ಇದ್ದನು. ಹೀಗಿರಲು ಒಂದು ದಿನ ರಾಮನು ಲಕ್ಷ್ಮಣನನ್ನು ಕರೆದು ಸೀತೆಯನ್ನು ಹುಡುಕುವ ಕೆಲಸದಲ್ಲಿ ಸುಗ್ರೀವನು ತೊಡಗುವಂತೆ ಅವನನ್ನು ಎಚ್ಚರಿಸಬೇಕೆಂದು ಹೇಳಿಕಳುಹಿಸಿ ದನು. ಲಕ್ಷ್ಮಣನು ಕಿಷ್ಕಿಂಧೆಗೆ ನಡೆದನು. ಕೋಪಗೊಂಡ ಲಕ್ಷ್ಮಣನು ಬರುತ್ತಿರುವ ವಾರ್ತೆಯನ್ನು ಸುಗ್ರೀವನ ಮಂತ್ರಿಗಳು ಅವನಿಗೆ ತಿಳಿಸಿದರು.

ಸುಗ್ರೀವನು ಲಕ್ಷ್ಮಣನನ್ನು ಶಾಂತಗೊಳಿಸುವಂತೆ ತಾರೆಯನ್ನು ಕಳು ಹಿಸಿದನು. ತಾರೆಯು ಭಕ್ತಿಯಿಂದ ಲಕ್ಷ್ಮಣನನ್ನು ಸ್ವಾಗತಿಸಿದಳು. ಲಕ್ಷ್ಮ

ಣನು ತಾರೆಯ ಮಾತುಗಳಿಂದ ಶಾಂತನಾಗಿ ಮನೋಹರವಾದ ಸುಗ್ರೀವನ ಅಂತಃಪುರವನ್ನು ಹೊಕ್ಕನು. ಸುಖಭೋಗದಲ್ಲಿದ್ದ ಸುಗ್ರೀವನನ್ನು ಕಂಡು ಲಕ್ಷ್ಮಣನು ಕೋಪಗೊಂಡನು. "ಮಿತ್ರಕಾರ್ಯವನ್ನು ಮರೆತೆಯಲ್ಲ? ರಾಮನಿಗೆ ನೀನಿತ್ತ ಮಾತನ್ನು ಮರೆತು ನೀನಿಲ್ಲಿ ಸುಖದಿಂದಿರುವುದೇ? ವಾಲಿಗಾದ ಗತಿಯನ್ನು ನೆನೆದುಕೋ!" ಎಂದು ಲಕ್ಷ್ಮಣನು ಗದರಿಸಿದನು. ಆಗ ತಾರೆಯು ಲಕ್ಷ್ಮಣನನ್ನು ಸಮಾಧಾನಪಡಿಸಿದಳು. "ಸುಗ್ರೀವನು ರಾಮನ ಉಪಕಾರವನ್ನು ಮರೆತಿಲ್ಲ. ಸುಗ್ರೀವನ ಆಜ್ಞೆಗಾಗಿ ವಾನರರೆಲ್ಲ ಕಾದು ಕುಳಿತಿದ್ದಾರೆ. ದೇಶಭ್ರಷ್ಟನಾಗಿದ್ದ ಸುಗ್ರೀವನು ಈಗ ಸುಖಭೋಗದಲ್ಲಿದ್ದನೆಂಬುದು ನಿಜ. ಅವನನ್ನು ನೀವು ಮನ್ನಿಸಬೇಕು". ಸುಗ್ರೀವನೂ ಮುಂದೆ ಬಂದು ಲಕ್ಷ್ಮಣನಿಗೆ ವಂದಿಸಿ ರಾಮಕಾರ್ಯದಲ್ಲಿ ನಿರತನಾಗುವೆನೆಂದನು. ಸೀತೆಯ ಅನ್ವೇಷಣಕ್ಕೆ ತೊಡಗುವೆನೆಂದನು. ಅನಂತರ ಸುಗ್ರೀವನು ಹನುಮಂತನೊಡನೆ ವಾನರಸೇನೆಯನ್ನು ಕೂಡಿಕೊಂಡು ಮಹಾಸಂಭ್ರಮದಿಂದ ರಾಮನಿದ್ದಲ್ಲಿಗೆ ಬಂದನು.

ಶ್ರೀರಾಮನನ್ನು ದೂರದಿಂದಲೇ ನೋಡಿದ ಸುಗ್ರೀವನು ಲಕ್ಷ್ಮಣನೊಂದಿಗೆ ಪಲ್ಲಕಿಯಿಂದ ಇಳಿದು ರಾಮನೆಡೆಗೆ ನಡೆದನು. ಹನುಮಂತನೂ ಅವರೊಂದಿಗೆ ನಡೆದನು. ಸುಗ್ರೀವನ ವಾನರಸೇನೆಯನ್ನು ಕಂಡು ರಾಮನ ಕೋಪವು ಶಾಂತವಾಯಿತು. ಅವನು ಸುಗ್ರೀವನನ್ನು ಸ್ವಾಗತಿಸಿದನು. ಅಷ್ಟರಲ್ಲಿ ಶತಬಲಿ, ಸುಷೇಣ, ತಾರ, ನೀಲ, ಗಜ, ಧೂಮ್ರ, ಜಾಂಬವ ಮೊದಲಾದವರೂ ತಮ್ಮ ಸೇನೆಯೊಂದಿಗೆ ಅಲ್ಲಿಗೆ ಬಂದರು. ಆಗ ಸುಗ್ರೀವನು ಶ್ರೀರಾಮನ ಸೂಚನೆಯಂತೆ ಆ ಕಪಿವೀರರನ್ನು ಸೀತೆಯನ್ನು ಹುಡುಕಲು ಹೋಗುವಂತೆ ಆಜ್ಞೆಮಾಡಿದನು. ವಿನತನೆಂಬ ನೀತಿನಿಪುಣನಾದ ಕಪಿವೀರನು ಲಕ್ಷ ವಾನರರೊಂದಿಗೆ ಪೂರ್ವದಿಕ್ಕಿಗೆ ಹೋಗಬೇಕೆಂದೂ ತಾರೆಯ ತಂದೆಯೂ ಸುಗ್ರೀವನ ಮಾವನೂ ಆದ ಸುಷೇಣನು ಪಶ್ಚಿಮ ದಿಕ್ಕಿಗೆ ಹೋಗುವುದೆಂದೂ ಶತಬಲಿಯು ಉತ್ತರ ದಿಕ್ಕಿನಲ್ಲಿ ಸೀತೆಯನ್ನು ಹುಡುಕಬೇಕೆಂದೂ ಅಂಗದ, ನೀಲ, ಜಾಂಬವ, ಹನುಮಂತ ಮುಂತಾದವರು ದಕ್ಷಿಣ ದಿಕ್ಕಿನಲ್ಲಿ ಹುಡುಕಬೇಕೆಂದೂ ಸುಗ್ರೀವನು ಆಜ್ಞೆಯಿತ್ತನು. ಹೀಗೆ ನಾಲ್ಕು ದಿಕ್ಕುಗಳಲ್ಲೂ ಸೀತೆಯ ಅನ್ವೇಷಣಕ್ಕಾಗಿ ಕಪಿವೀರರ ನೇಮಕವಾಯಿತು. ಹೀಗೆ ಹೊರಟು

ನಿಂತ ಕಪಿವೀರರನ್ನು ಶ್ರೀರಾಮನು ನೋಡಿದನು. ಅವರಲ್ಲಿ ಹನುಮಂತನೇ ಸೀತೆಯನ್ನು ಹುಡುಕಲು ಸಮರ್ಥನೆಂದು ಭಾವಿಸಿ, ರಾಮನು ಅವನೊಡನೆ ತನ್ನ ಮುದ್ರೆಯುಂಗುರವನ್ನು ಕೊಟ್ಟನು. ಆಂಜನೇಯನು ಭಕ್ತಿಯಿಂದ ಆ ಉಂಗುರವನ್ನು ತೆಗೆದುಕೊಂಡು ಹೊರಡಲು ಸಿದ್ಧನಾದನು.

ಸುಗ್ರೀವನು ಮತ್ತೊಮ್ಮೆ ವಾನರರನ್ನು ಕರೆದು ಅವರವರಿಗೆ ಹೇಳಬೇಕಾದುವನ್ನೆಲ್ಲ ತಿಳಿಸಿದನು. ಸುಗ್ರೀವನ ಆಜ್ಞೆಯಂತೆ ಕಪಿವೀರರು ಸೀತೆಯನ್ನು ಹುಡುಕಲು ಹೊರಟು ಹೋದರು. ಶ್ರೀರಾಮನು ಲಕ್ಷ್ಮಣನೊಂದಿಗೆ ಪ್ರಸ್ರವಣಗಿರಿಯಲ್ಲೇ ಸೀತೆಯ ನೆನಪಿನಲ್ಲಿದ್ದನು. ಸೀತೆಯನ್ನು ಹುಡುಕುವ ಕೆಲಸಕ್ಕೆ ಸಮರ್ಥರಾದ ವಾನರ ವೀರರನ್ನು ಕಳುಹಿಸಿದ ಮೇಲೆ ಸುಗ್ರೀವನು ಸಮಾಧಾನಗೊಂಡನು.

ಸೀತಾನ್ವೇಷಣ ಕಾರ್ಯವು ಭರದಿಂದ ಸಾಗಿತು. ಕಪಿವೀರರು ತಾನು ತಾನೆಂದು ಮುನ್ನುಗ್ಗಿ ಹುಡುಕಲಾರಂಭಿಸಿದರು. ಅವರು ಬೆಟ್ಟಗಳನ್ನು ಹತ್ತಿ ಹುಡುಕಿದರು. ಗುಹೆಗಳನ್ನು ನುಗ್ಗಿ ನೋಡಿದರು. ಆದರೆ ಎಲ್ಲಿಯೂ ಸೀತೆಯಿಲ್ಲ. ಹಗಲು ಹುಡುಕಾಡಿದ ವಾನರರು ರಾತ್ರಿಹೊತ್ತು ವಿಶ್ರಾಂತಿಗೊಳ್ಳುತ್ತಿದ್ದರು. ಹೀಗೆ ದಿನಗಳು ಉರುಳಿದುದು ಅವರಿಗೆ ತಿಳಿಯಲೇ ಇಲ್ಲ. ಒಂದು ತಿಂಗಳ ಅವಧಿ ಮುಗಿವ ವೇಳೆಗೆ ಪೂರ್ವ ಪಶ್ಚಿಮ ಉತ್ತರ ದಿಕ್ಕುಗಳಿಗೆ ಹೋದ ವಿನತ, ಸುಷೇಣ ಮತ್ತು ಶತಬಲಿಗಳು ತಮ್ಮ ಸೇನೆಯೊಂದಿಗೆ ಮರಳಿ ಬಂದರು. ಸೀತೆಯ ಸುದ್ದಿಯೇ ಇಲ್ಲವೆಂದು ಸುಗ್ರೀವನಿಗೆ ತಿಳಿಸಿದರು. ತಮ್ಮ ವಿಷಾದದೊಡನೆ ಸುಗ್ರೀವನೂ ಪಾಲುಗೊಳ್ಳುವಂತೆ ಮಾಡಿದರು. ಆದರೆ ಸುಗ್ರೀವನು ಪೂರ್ಣ ನಿರಾಶನಾಗಲಿಲ್ಲ. ಕಾರಣ ಅಂಗದನೊಡನೆ ದಕ್ಷಿಣ ದಿಕ್ಕಿಗೆ ಹೋದ ಹನುಮಂತನೇ ಮೊದಲಾದವರು ಸೀತೆಯ ಸುದ್ದಿಯನ್ನು ತಂದೇ ತರುವರೆಂದು ಅವನು ನಂಬಿದ್ದನು. ಅದರಂತೆ ಅವರ ಬರವನ್ನೇ ಇದಿರುನೋಡುತಿದ್ದನು.

ಇತ್ತ ದಕ್ಷಿಣ ದಿಕ್ಕಿಗೆ ಹುಡುಕಲು ಹೊರಟ ಅಂಗದ ಸಂಗಡದವರು ಸುಗ್ರೀವನು ಸೂಚಿಸಿದ ಸ್ಥಳಗಳನ್ನೆಲ್ಲ ನೋಡಿದರು. ಕಾಡು ನಾಡುಗಳೆನ್ನದೆ ಹುಡುಕಿದರು. ಆದರೆ ಸೀತೆಯ ಸುಳಿವೇ ಇಲ್ಲ. ಅವರು ಮುಂದೆ ಹೋಗು

ನಾಗ ಭಯಂಕರವಾದ ಒಂದು ಕಾಡಿನಲ್ಲಿ ಒಬ್ಬ ಕ್ರೂರಿಯಾದ ರಾಕ್ಷಸನು ಅವರಿಗೆ ಇದಿರಾದನು. ಮಹಾವೀರನಾದ ಅಂಗದನು ಅವನೇ ರಾವಣನೆಂದು ಬಗೆದು ಬಲವಾಗಿ ಗುದ್ದಿದನು. ಅಂಗದನ ಪೆಟ್ಟುಗಳಿಂದ ಆ ರಾಕ್ಷಸನು ನೆತ್ತರುಕಾರಿ ಸತ್ತನು. ಸೀತೆಯ ಅನ್ವೇಷಣದಲ್ಲಿ ವಿಫಲರಾದ ಕಪಿವೀರರೆಲ್ಲ ಮುಂದೇನು ಗತಿಯೆಂದು ಚಿಂತಿಸತೊಡಗಿದರು. ಆಗ ಅಂಗದನು ಅವರನ್ನು ಹುರುಪುಗೊಳಿಸುವ ವೀರವಾಕ್ಯಗಳನ್ನು ಹೇಳಿದನು. ಸುಗ್ರೀವನ ಶಾಸನವನ್ನು ಮೀರುವುದು ಅಸಾಧ್ಯವೆಂದನು. ಹೀಗಿರುವಾಗಲೇ ಸುಗ್ರೀವನಿತ್ತ ಅವಧಿ ಮೀರಿಹೋಯಿತು. ಅವರ ಚಿಂತೆ ಹೆಚ್ಚಾಯಿತು. ಆದರೂ ಅವರು ತಮ್ಮ ಪ್ರಯತ್ನವನ್ನು ಬಿಡಲಿಲ್ಲ. ಮುಂದೆ ಹುಡುಕುತ್ತ ಹೋಗಲು ಋಕ್ಷಬಿಲವೆಂಬ ಗುಹೆಯ ಬಳಿಗೆ ಬಂದರು. ಅದು ಮಯನಿಂದ ರಕ್ಷಿತವಾದುದು. ವಾನರರು ಬಹಳ ಕಷ್ಟದಿಂದ ಅದರ ಒಳಗೆ ಹೋದರು. ಅಲ್ಲೊಂದು ಸರೋವರವಿತ್ತು. ಆ ಮನೋಹರವಾದ ಪ್ರದೇಶದಲ್ಲವರು ಸೀತೆಯನ್ನು ಹುಡುಕಾಡಿದರು. ಅಲ್ಲಿ ಒಬ್ಬಳು ತಪಸ್ವಿನಿಯಿದ್ದಳು. ಆಕೆಯ ಹೆಸರು ಸ್ವಯಂಪ್ರಭೆಯೆಂದು. ಆಕೆ ಅವರಿಗೆ ಆ ಬಿಲದ ಕಥೆಯನ್ನು ಹೇಳಿ, ವಾನರರು ಅಲ್ಲಿಗೇಕೆ ಬಂದುದೆಂದು ಕೇಳಿದಳು. ಹನುಮಂತನು ಆಕೆಗೆ ರಾಮನ ವೃತ್ತಾಂತವನ್ನು ತಿಳಿಸಿ ಸೀತೆಯನ್ನು ಹುಡುಕುತ್ತ ಬಂದೆವೆಂದು ಹೇಳಿದನು. ಆವಳು ಸಂತೋಷದಿಂದ ವಾನರರಿಗೆ ಕಂದಮೂಲಾದಿಗಳನ್ನಿತ್ತು ಸತ್ಕರಿಸಿ ಅವರನ್ನು ತನ್ನ ಪ್ರಭಾವದಿಂದ ಹೊರಗೆ ತಂದು ಹರಸಿ ಬೀಳ್ಕೊಟ್ಟಳು.

ಸ್ವಯಂಪ್ರಭೆಯಿಂದ ಬೀಳ್ಕೊಂಡ ಕಪಿವೀರರು ಬಹುದೂರದ ವರೆಗೆ ನಡೆದರು. ಕೊನೆಗೆ ಅವರು ಭೋರ್ಗರೆಯುತ್ತಿದ್ದ ಮಹಾಸಾಗರವನ್ನು ಕಂಡರು. ಅಲೆದು ಹುಡುಕಿ ಕಂಗೆಟ್ಟ ಅವರು ಆಯಾಸದಿಂದ ಅಲ್ಲಿ ಬಿದ್ದುಬಿಟ್ಟರು. ವಾನರರ ಈ ಸ್ಥಿತಿಯನ್ನು ನೋಡಿ ಅಂಗದನು ಮುಂದೇನು ಮಾಡುವುದೆಂದು ಆಲೋಚನೆ ಮಾಡಿದನು. ಏನು ಯೋಚಿಸಿದರೂ ಅವನಿಗೆ ಭವಿಷ್ಯವು ಭಯಂಕರವಾಗಿ ಕಂಡಿತು. "ಸೀತೆಯನ್ನು ನಾವು ಕಾಣುವಂತಿಲ್ಲ. ಸೀತೆಯ ಸುದ್ದಿ ಇಲ್ಲದೆ ಹೋದರೆ ಸುಗ್ರೀವನು ನಮ್ಮನ್ನು ಉಳಿಸುವಂತಿಲ್ಲ. ಆದ್ದರಿಂದ ನಾನು ಇಲ್ಲಿ ಉಪವಾಸಮಾಡಿ ಸಾಯುತ್ತೇನೆ" ಎಂದು ಹೇಳಿದವನೇ ಹಿಂದುಳಿಗೆ ನಡುಗಿದನು. ಕಣ್ಣೀರು ಸುರಿಸುತ್ತ ದರ್ಭೆಯನ್ನು ಹಾಸಿ ಅದರ ಮೇಲೆ

ಮಲಗಿದನು. ಅವನ್ನು ಕಂಡು ಇತರ ವಾನರರೂ ಉಪವಾಸ ಮಾಡುವುದೇ ಒಳಿತೆಂದು ಅವನ ಸುತ್ತುಕುಳಿತು ರಾಮಸೀತೆಯರ ಕುರಿತು ಮಾತನಾಡ ತೊಡಗಿದರು. ಅವರ ಮಾತು ಆ ಪ್ರದೇಶವನ್ನೇ ತುಂಬಿಬಿಟ್ಟಿತು.

ಆ ಪ್ರದೇಶದಲ್ಲೇ ಜಟಾಯುವಿನ ಅಣ್ಣನಾದ ಸಂಪಾತಿಯು ವಾಸವಾಗಿ ದ್ದನು. ಅವನು ಈ ಕಪಿವೀರರ ಮಾತನ್ನು ಕೇಳಿ ಅಲ್ಲಿಗೆ ಬಂದನು. ಅವರು ಆಗ ರಾಮನ ವನವಾಸ; ಸೀತೆಯನ್ನು ರಕ್ಷಿಸಲು ಜಟಾಯು ಮಾಡಿದ ಯುದ್ಧ; ಜಟಾಯುವಿನ ಮರಣ ಮುಂತಾದ ವಿಚಾರವಾಗಿ ಮಾತನಾಡುತಿದ್ದರು. ಅವನ್ನು ಕೇಳಿದ ಸಂಪಾತಿ ಅವರಾರೆಂದು ವಿಚಾರಿಸಿದನು. ಕಪಿವೀರರು ತಮ್ಮ ಸಂಗತಿಯನ್ನೆಲ್ಲ ತಿಳಿಸಿ, ಸುಗ್ರೀವನ ಆಜ್ಞೆಯನ್ನು ನೆರವೇರಿಸದ ಅವರು ಸಾಯಲು ಸಿದ್ಧರಾಗಿದ್ದೇವೆಂದು ತಿಳಿಸಿದರು. ಆಗ ಸಂಪಾತಿಯು ಅವರಿಗೆ ತನ್ನ ಕಥೆಯನ್ನು ಹೇಳಿದನು. "ರಾವಣನು ಸೀತೆಯನ್ನು ಕದ್ದೊಯ್ದುದನ್ನು ನಾನು ಕಂಡಿದ್ದೇನೆ. ರಾವಣನು ಲಂಕೆಯ ರಾಜನು. ಸುಂದರವಾದ ಲಂ ಕೆಯ ಕೋಟೆಯು ದುರ್ಗಮವಾದುದು. ಆ ಲಂಕೆಯು ಸಾಗರದ ಮಧ್ಯ ದಲ್ಲಿದೆ. ಈ ಸಮುದ್ರವನ್ನು ದಾಟಿ ಲಂಕೆಗೆ ಹೋದರೆ ಅಲ್ಲಿ ಸೀತೆಯು ಸಿಗ ಬಹುದು. ಈಗ ನನ್ನನ್ನು ಸಾಗರದ ತಡಿಗೆ ಕೊಂಡೊಯ್ದು ಬಿಡಿರಿ". ಕಪಿ ವೀರರು ಹಾಗೇ ಮಾಡಿದರು. ಅಲ್ಲಿ ಸಂಪಾತಿಯು ತಮ್ಮನಿಗೆ ತಿಲೋದಕ ವನ್ನು ಕೊಟ್ಟನು. ಅಷ್ಟು ಹೊತ್ತಿಗೆ ನಿಶಾಕರ ಮುನಿಯ ಮಾತಿನಂತೆ ಸಂಪಾತಿಗೆ ಹೊಸ ರೆಕ್ಕೆಗಳು ಹುಟ್ಟಿಬಂದುವು. ಸಂಪಾತಿಯು ಕೂಡಲೇ ಆಕಾಶಕ್ಕೆ ಹಾರಿಹೋದನು.

ಪಕ್ಷಿರಾಜನಾದ ಸಂಪಾತಿಯು ಹಾರಿಹೋದ ಮೇಲೆ ಅಂಗದಾದಿಗಳು ಆ ಮಹಾಸಾಗರವನ್ನು ದಾಟಿ ಲಂಕೆಗೆ ಹೋಗುವುದು ಹೇಗೆಂದು ಯೋಚಿ ಸಿದರು. ನೂರು ಯೋಜನದ ಕಡಲನ್ನು ದಾಟಿ ಸೀತೆಯ ಸುದ್ದಿ ತರುವ ವೀರರು ಯಾರೆಂದು ಒಬ್ಬರಿಗೊಬ್ಬರು ಕೇಳಿಕೊಂಡರು. ಕೊನೆಗೆ ಈ ಕೆಲಸ ವನ್ನು ಮಾಡಲು ಆಂಜನೇಯನೊಬ್ಬನೆ ಸಮರ್ಥನೆಂದು ಜಾಂಬವನು ತಿಳಿಸಿ ದನು. ಎಲ್ಲರೂ ಅವನನ್ನೇ ಪ್ರೋತ್ಸಾಹಿಸಿದರು. ಹನುಮಂತನು ವೀರಾವೇಶ ದಿಂದ ಸಮುದ್ರವನ್ನು ಹಾರಲು ಮುಂದಾದನು. ಅದಕ್ಕಾಗಿ ಅವನು ಮಹೇಂದ್ರ ಪರ್ವತಕ್ಕೆ ನೆಗೆದು ಅಲ್ಲಿಂದ ಲಂಕೆಗೆ ಹಾರಲು ಉದ್ಯುಕ್ತನಾದನು.

## ೫. ಸುಂದರಕಾಂಡ.

ಮಹೇಂದ್ರ ಪರ್ವತವನ್ನೇರಿ ಅಲ್ಲಿಂದ ಹಾರಲು ನಿಶ್ಚೈಸಿದ ಹನುಮಂತನು ಆ ಪರ್ವತ ಶಿಖರವನ್ನು ತುಳಿದು ಹಾರಿದನು. ಕಣ್ಣುಮುಚ್ಚಿ ತೆರೆಯುವಷ್ಟರಲ್ಲಿ ಬಲವಾದ ಬಿಲ್ಲಿನಿಂದ ಹೊರಟ ದಿವ್ಯಾಸ್ತ್ರದಂತೆ ಅವನು ಆಕಾಶಕ್ಕೆ ಹಾರಿದನು. ನೀರಿನಲ್ಲಿ ಈಜಾಡಿಕೊಂಡು ಹೋಗುವವನಂತೆ ವಾಯುಪುತ್ರನಾದ ಆಂಜನೇಯನು ಗಾಳಿಯಲ್ಲಿ ಈಜಾಡುತ್ತಾ ದಕ್ಷಿಣಕ್ಕೆ ಸಾಗಿದನು. ಹೀಗೆ ಸಾಗುತ್ತಿರುವಾಗ ಸಮುದ್ರಮಧ್ಯದಿಂದ ಸುರಸೆಯೆಂಬ ರಾಕ್ಷಸಿಯು ಅವನನ್ನು ತಡೆದಳು. ಆಗ ಹನುಮಂತನು ದೊಡ್ಡದಾದಂತೆ ಆ ರಾಕ್ಷಸಿಯ ಬಾಯಿ ಕೂಡ ಅಗಲವಾಗುತಿತ್ತು. ಅದನ್ನು ಕಂಡು ಹನುಮಂತನು ಥಕ್ಕನೆ ಅಂಗುಷ್ಟದಷ್ಟು ಕಿರಿದಾಗಿ ಆಕೆಯ ಬಾಯೊಳಗೆ ನುಸುಳಿ ಹೊರಬಂದನು. ಆ ಮೇಲೆ ಸುರಸೆಯು ಅವನನ್ನು ಹೋಗಲು ಬಿಟ್ಟಳು. ಮುಂದೆ ಹೋಗುತ್ತಿರುವಾಗ ಸಮುದ್ರಮಧ್ಯದಲ್ಲಿ ವಾಸಿಸುವ ಸಿಂಹಿಕೆಯೆಂಬ ರಾಕ್ಷಸಿಯು ಹನುಮಂತನ ನೆರಳನ್ನು ಕಂಡಳು. ಅದರಿಂದಲೇ ಅವನನ್ನು ತಡೆದು, ತನ್ನೆಡೆಗೆ ಸೆಳೆದುಕೊಂಡಳು. ಹನುಮಂತನು ಅವಳ ಹೊಟ್ಟೆಯೊಳಗೆ ಹೊಕ್ಕು ಪರ್ವತದಷ್ಟು ದ್ಡೊಡ್ಡದಾಗಿ ಬೆಳೆದನು. ಆಗ ರಾಕ್ಷಸಿಯು ಹೊಟ್ಟೆ ಒಡೆದು ನೀರೊಳಗೆ ಮುಳುಗಿ ಸತ್ತುಹೋದಳು. ಆ ಮೇಲೆ ಹನುಮಂತನು ಮುಂದೆ ಸಾಗಿ ಲಂಕಾದ್ವೀಪವನ್ನು ಸೇರಿದನು. ಹನುಮಂತನು ಕೇದಗೆಯ ಬನದಿಂದ ಕೂಡಿದ ಲಂಬಾಚಲವೆಂಬ ಪರ್ವತದ ಶಿಖರದಲ್ಲಿಳಿದನು. ಅಲ್ಲಿ ಅವನಿಗೆ ಆ ಪರ್ವತದಿಂದಾಚೆಗೆ ತ್ರಿಕೂಟಶಿಖರವೆಂಬ ಪರ್ವತವೂ ಅದರ ಮೇಲ್ಗಡೆಯಿರುವ ಲಂಕಾನಗರವೂ ಕಾಣಿಸಿತು.

ನೂರು ಯೋಜನ ಅಗಲದ ಸಮುದ್ರವನ್ನು ಹಾರಿದರೂ ಹನುಮಂತನಿಗೆ ಆಯಾಸವೆಂಬುದಾಗಲಿಲ್ಲ. ಬಂದ ಕಾರ್ಯವನ್ನು ಸಾಧಿಸಬೇಕೆಂಬ ಹುರುಪಿನಲ್ಲಿ ಅವನಿಗೆ ಆಯಾಸವೇ ಆಗಲಿಲ್ಲ. ಹನುಮಂತನು ಲಂಬಾಚಲದಿಂದ ನೆಗೆದು ಲಂಕಾನಗರಿಗೆ ನಡೆದನು. ಆ ನಗರದ ಸುತ್ತಲೂ ಅಭೇದ್ಯವಾದ ಕೋಟೆ. ಕೋಟೆಯ ಮೇಲ್ಗಡೆಯಲ್ಲಿ ಸೈನಿಕರ ಕಾವಲು. ಹನುಮಂತನು ಸೂರ್ಯನು ಮುಳುಗಿದೊಡನೆ ಪುರಪ್ರವೇಶಮಾಡುವುದು ಹೇಗೆಂದು

ಯೋಚಿಸುತ್ತ ಮುಂದೆ ನಡೆದನು. ಆಗ "ಈ ನಗರದ ಅಧಿದೇವತೆಯಾದ ಲಂಕಾದೇವಿ ನಾನು. ನನ್ನನ್ನು ಗೆದ್ದು ನಗರ ಪ್ರವೇಶಮಾಡು" ಎಂದು ಬೊಬ್ಬಿಡುತ್ತ ಲಂಕಿಣಿಯೆಂಬ ರಾಕ್ಷಸಿಯು ಹನುಮಂತನನ್ನು ತಡೆದಳು. "ಸುಂದರವಾದ ಈ ನಗರದ ಸೌಂದರ್ಯವನ್ನು ನೋಡಲು ನಾನು ಬಂದಿರುತ್ತೇನೆ. ದೇವಿ ನನ್ನನ್ನು ಬಿಟ್ಟುಬಿಡು" ಎಂದು ಅವನು ಬೇಡಿಕೊಂಡರೂ ಆಕೆ ಕೇಳಲಿಲ್ಲ. ಅವಳು ಅವನ ಮೇಲೇರಿ ಬಂದು ತಲೆಗೆ ಬಲವಾಗಿ ಗುದ್ದಿದಳು. ಅವನೂ ಗುದ್ದಿದನು. ಹನುಮಂತನ ಪೆಟ್ಟಿಗೆ ಉರುಳಿಬಿದ್ದ ಲಂಕಿಣಿ ರಕ್ತ ಕಾರತೊಡಗಿದಳು. ಅವಳು ರಾವಣನಿಗೆ ಅಳಿಗಾಲವೊದಗಿತೆಂದು ತಿಳಿದು ಹನುಮಂತನನ್ನು ಊರೊಳಗೆ ಬಿಟ್ಟಳು. ಹನುಮಂತನು ಉತ್ಸಾಹದಿಂದ ಮುಂದಕ್ಕೆ ಹಾರಿ ಕೋಟೆಯೊಳಗೆ ಹೋದನು.

ಕೋಟೆಯ ಒಳಹೊಕ್ಕ ಹನುಮಂತನು ರಾಜಮಾರ್ಗದಲ್ಲೇ ಮುನ್ನಡೆದನು. ಮಾರ್ಗದ ಇಕ್ಕಡೆಗಳಲ್ಲಿ ಅಲಂಕೃತವಾದ ಅರಮನೆಗಳೂ ಸೌಧಗಳೂ ಸೊಗಸಾಗಿ ಕಾಣುತಿದ್ದುವು. ಮನೆಮನೆಗಳಿಂದ ಸಂಗೀತಧ್ವನಿ ಕೇಳುತಿತ್ತು. ಹನುಮಂತನು ಲಂಕೆಯ ಚೆಲುವನ್ನೂ ಜನರ ರಸಿಕತೆಯನ್ನೂ ಮೆಚ್ಚುತ್ತ ಮುಂದೆ ಹೋದನು. ಹೀಗೆ ಹೋಗುತ್ತಿರುವಾಗ ಅವನು ರಾವಣನ ಅರಮನೆಯ ಬಳಿಗೆ ಬಂದನು. ಅದರ ಸುತ್ತಲೂ ದೊಡ್ಡ ಪ್ರಾಕಾರ. ಆನೆ ಕುದುರೆ ರಥಗಳೇ ಮೊದಲಾದ ವಾಹನಗಳು ಅಲ್ಲಿ ತುಂಬಿದ್ದುವು. ಶಸ್ತ್ರ ಹಿಡಿದ ಸೈನಿಕರು ಕಾವಲು ಮಾಡುತಿದ್ದರು. ಹನುಮಂತನು ಸದ್ದಿಲ್ಲದೆ ಅರಮನೆಯ ಪ್ರಾಕಾರದ ಒಳಗೆ ಹೋದನು. ಅಷ್ಟು ಹೊತ್ತಿಗೆ ಮಧ್ಯರಾತ್ರಿಯಾಗಿತ್ತು. ಆಗ ತಾನೆ ಚಂದ್ರೋದಯವಾಯಿತು. ಹಾಲು ಚೆಲ್ಲಿದಂತೆ ಹಬ್ಬಿದ ಬೆಳದಿಂಗಳಲ್ಲಿ ಹನುಮಂತನು ಸೀತೆಯನ್ನು ಹುಡುಕುತ್ತ ಮನೆಯಿಂದ ಮನೆಗೆ ಹೋದನು. ಪಟ್ಟಣದಲ್ಲಿ ಒಂದೊಂದು ಮನೆಯಿಂದ ವೀಣೆ, ಕೊಳಲು ಮುಂತಾದ ವಾದ್ಯಗಳ ಸಂಗೀತವು ಕೇಳಿಬರುತಿತ್ತು. ಕೆಲವೆಡೆಗಳಲ್ಲಿ ಸಂಗೀತ ನೃತ್ಯಗಳಾಗುತಿದ್ದುವು. ಮತ್ತೆ ಕೆಲವು ಮನೆಗಳಲ್ಲಿ ಹೆಣ್ಣುಗಂಡುಗಳೆನ್ನದೆ ಎಲ್ಲರೂ ಮದಿರಾ ಪಾನದಿಂದ ಮತ್ತರಾಗಿ ಬಿದ್ದಿದ್ದರು. ಅಲ್ಲಿ ಎಲ್ಲಿ ಹುಡುಕಿದರೂ ಪತಿವ್ರತಾ ಶಿರೋಮಣಿಯಾದ ಸೀತೆಯು ಸಿಗಲಿಲ್ಲ. ಸೀತೆ ಸಿಗಲಿಲ್ಲವೆಂದು ಹನುಮಂತನೊಮ್ಮೆ ಮೌನವಾಗಿ ಕುಳಿತು ಯೋಚಿಸಿದನು.

ಮತ್ತೊಮ್ಮೆ ಊರಲ್ಲೆಲ್ಲ ಸುತ್ತಿಕೊಂಡು ಬಂದನು. ತಾನು ಹೋದಲ್ಲಿ ಸೀತೆ ಯಿಲ್ಲವೆಂದು ಖಚಿತವಾಯಿತು. ಆದ್ದರಿಂದ ಇನ್ನೊಮ್ಮೆ ಅರಮನೆಯಲ್ಲೇ ಹುಡುಕಬೇಕೆಂದು ಮಾರುತಿಯು ಮುನ್ನಡೆದನು. ಅವನು ರಾವಣನ ಅರ ಮನೆಗೊಮ್ಮೆ ಹೋಗಿ ಹುಡುಕಿದ್ದರೂ ರಾವಣನ ಅಂತಃಪುರಕ್ಕೆ ಹೋಗಿರಲಿಲ್ಲ. ಅದಕ್ಕಾಗಿ ಅಲ್ಲಿಗೆ ನಡೆದನು. ರಾವಣನ ಅಂತಃಪುರವು ಅತ್ಯಂತ ಸುಂದರ ವಾದ ಸೌಧವಾಗಿತ್ತು. ಅದು ಅವನ ವೈಭವವನ್ನು ಕರೆದುಕರೆದು ತೋರಿ ಸುವಂತಿತ್ತು. ಆ ದಿವ್ಯ ಭವನದ ಸೌಂದರ್ಯವನ್ನೂ ವೈಭವವನ್ನೂ ಕಂಡು ಹನುಮಂತನಿಗೆ ಆಶ್ಚರ್ಯವಾಯಿತು. ಶಸ್ತ್ರವಿದ್ಯೆಯಲ್ಲಿ ಪ್ರವೀಣರಾದ ಸಾವಿ ರಾರು ವೀರರು ಅಲ್ಲಿ ಕಾವಲು ಮಾಡುತಿದ್ದರು. ಅನೇಕ ಮಂದಿ ಅಲಂಕೃತ ರಾದ ವಿಲಾಸಿನಿಯರು ಅತ್ತಿತ್ತ ಸಂಚರಿಸುತಿದ್ದರು. ಮಾರುತಿಯು ಉಪ್ಪರಿಗೆ ಗಳನ್ನು ಹತ್ತಿ ಇಳಿದನು. ಕೋಣೆಗಳನ್ನು ಹೊಕ್ಕು ಹೊರಟನು. ಉದ್ಯಾನ ಗಳಲ್ಲಿ ಸುತ್ತಿಸುತ್ತಿ ಸೀತೆಯನ್ನು ಹುಡುಕಿದನು. ಹೀಗೆ ಹುಡುಕುತ್ತಿರುವಾಗ ಅವನೊಂದು ಸುಂದರವಾದ ಅಂತಃಪುರಕ್ಕೆ ಬಂದನು. ಅಲ್ಲಿ ಸೌಂದರ್ಯದ ಅಧಿದೇವತೆಯೋ ಎಂಬಂತೆ ಒಬ್ಬ ಸ್ತ್ರೀಯು ಮಲಗಿದ್ದಳು. ಅವಳನ್ನು ಕಂ ಡೊಡನೆ ಹನುಮಂತನಿಗೆ ಆಕೆಯೇ ಸೀತೆಯಿರಬೇಕೆಂದು ತೋರಿತು. ತಾನು ಸೀತೆಯನ್ನು ಕಂಡೆನೆಂದು ಕುಣಿದಾಡಿಬಿಟ್ಟನು. ಮರುಕ್ಷಣವಲ್ಲೇ ಅವನು ಯೋಚನೆಗೊಳಗಾದನು. ರಾಮನಂತಹ ಸುಂದರನನ್ನು ಮೆಚ್ಚಿದ ಸೀತೆ ಯಂತಹ ಮಹಾ ಪತಿವ್ರತೆಯು ರಾವಣನ ಅಂತಃಪುರದಲ್ಲಿ ಇರಲಾರಳೆಂದು ಅವನಿಗೇ ಹೊಳೆಯಿತು. "ಅಯ್ಯೋ ನನ್ನ ಮಂಕುಬುದ್ಧಿಯೇ!" ಎಂದು ನಾಚಿಗೊಂಡನು. ಕೂಡಲೇ ಅಲ್ಲಿಂದ ಹಾರಿ ಬೇರೆ ಕಡೆಗೆ ಹೋದನು. ಅಲ್ಲಿ ಮಲಗಿದ್ದವಳು ನಿಜವಾಗಿಯೂ ರಾವಣನ ಪಟ್ಟದರಾಣಿಯಾದ ಮಂಡೋದರಿ. ಆಕೆ ಗುಣವಂತಳೂ ರೂಪವಂತಳೂ ಆಗಿದ್ದಳು.

ಎಲ್ಲಿ ಹುಡುಕಿದರೂ ಸೀತೆ ಸಿಗದಿರಲು ಹನುಮಂತನಿಗೆ ಬಹಳ ದುಃಖ ವಾಯಿತು. ಅವನ ಮನಸ್ಸಿನಲ್ಲಿ ಹಲವು ಯೋಚನೆಗಳು ಬಂದುವು. "ರಾಮ ನಿನ್ನು ಬರಲಾರನು; ಈ ರಾಕ್ಷಸನ ಕೈಗೆ ಸಿಗಬಾರದೆಂದು ಸೀತೆ ಆತ್ಮಹತ್ಯೆ ಮಾಡಿಕೊಂಡಿರಬಹುದೇ? ತನ್ನ ಮಾತಿಗೆ ಒಡಂಬಡದ ಸೀತಾಸುಂದರಿಯನ್ನು ರಾವಣನೇ ಕಡಿದಿರಬಹುದೇ? ಸೀತೆಯ ಮನಸ್ಸನ್ನು ರಾವಣನ ಕಡೆಗೆ ತಿರು

ಗಿಸಲು ಪ್ರಯತ್ನಿಸಿದ ರಕ್ಕಸಿಯರು ಕೋಪಗೊಂಡು ಆಕೆಯನ್ನು ಕಚ್ಚಿಕಚ್ಚಿ ತಿಂದಿರಬಹುದೇ? ಅಯ್ಯೋ! ಸೀತೆಯಳಿದರೆ ಶ್ರೀರಾಮಚಂದ್ರನು ಉಳಿವನೇ? ಲಕ್ಷ್ಮಣದೇವನು ಉಳಿವನೇ? ಈ ಸೋದರರನ್ನು ಬಿಟ್ಟು ಆ ಸೋದರರು ಬದುಕುವರೇ? ಅಯ್ಯೋ! ದಶರಥನ ವಂಶವೇ ಅಳಿವಂತಾಯಿತಲ್ಲ" ಎಂದು ಏನೇನೊ ಯೋಚಿಸಿ ದುಃಖಪಟ್ಟನು. ಆಗ ತಾನೆ ನಿರಾಶೆಯ ಮಧ್ಯದಲ್ಲಿ ಆಶೆಯು ಚಿಗುರೊಡೆಯಿತು. ಬಾಡಿದ ಮುಖ ಅರಳಿತು. "ಇಲ್ಲ! ಶ್ರೀರಾಮನಂತಹ ಪುರುಷಸಿಂಹನ ಸತಿಯಾದ ಸೀತೆಯೆಂದೂ ಆತ್ಮಹತ್ಯೆ ಮಾಡಿಕೊಳ್ಳಲಾರಳು. ರಾಮನ ಧ್ಯಾನಮಾಡುತ್ತ ಎಲ್ಲಾದರೂ ಇದ್ದೇ ಇರುವಳು. ನಾನು ಆಕೆಯನ್ನು ಹುಡುಕಲೇ ಬೇಕು" ಎಂದು ಸಂತೋಷದಿಂದ ಹಾರಿ ಕುಣಿದನು. ಉತ್ಸಾಹಗೊಂಡ ಮಾರುತಿ ಅತ್ತಿತ್ತ ನೋಡಿದನು. ಹಾಲು ಚೆಲ್ಲಿದಂತಹ ಆ ಬೆಳದಿಂಗಳ ಬೆಳಕಿನಲ್ಲಿ ಸಮೀಪದಲ್ಲೇ ಒಂದು ಉದ್ಯಾನವು ಅವನಿಗೆ ಕಂಡಿತು. "ಸೀತೆ ಆ ವನದಲ್ಲೇ ಇರಬೇಕು. ಅದೇ ರಾವಣನ ಅಶೋಕವನವಿರಬೇಕು" ಎಂದವನೇ ಒಂದೇ ನೆಗೆತಕ್ಕೆ ಆ ವನವನ್ನು ಸೇರಿದನು.

ಆಗ ವಸಂತಕಾಲ! ಮರಗಿಡಗಳಲ್ಲಿ ಹೂ ಹಣ್ಣುಗಳು ತುಂಬಿದ್ದುವು. ಎಲ್ಲಿ ನೋಡಿದರೂ ಕಣ್ಣಿಗೆ ಹಬ್ಬವನ್ನುಂಟುಮಾಡುವ ಬಣ್ಣಬಣ್ಣದ ಹೂಗಿಡಗಳ ಸಾಲುಸಾಲುಗಳು! ಅವುಗಳ ಮಧ್ಯದಲ್ಲಿ ಫಲಭರಿತವಾದ ಮರಗಳು! ಆ ವನದ ಶೋಭೆಯನ್ನು ಮತ್ತಷ್ಟು ಹೆಚ್ಚಿಸುವಂತೆ ವಿಧವಿಧದ ಪಕ್ಷಿಗಳು ಮರಗಳೆಡೆಯಿಂದ ಇಂಪಾಗಿ ಉಲಿಯುತಿದ್ದುವು. ವಿಶಾಲವಾದ ಆ ವನದಲ್ಲಿ ಅಲ್ಲಲ್ಲಿ ತಾವರೆಗಳಿರುವ ಕೊಳಗಳಿದ್ದುವು. ಉದ್ಯಾನದಲ್ಲಿ ಸಂಚರಿಸುವವರಿಗಾಗಿ ಅಗಲವಾದ ಮಾರ್ಗಗಳಿದ್ದುವು. ಅಲ್ಲಲ್ಲಿ ಲತಾಗೃಹಗಳಿದ್ದುವು. ಹನುಮಂತನು ವನದ ಶೋಭೆಯನ್ನು ನೋಡುತ್ತ ಮುಂದುವರಿದನು. ಒಂದೆರಡು ಗಿಡಗಳನ್ನೂ ಮರಗಳನ್ನೂ ಬೇರುಸಹಿತ ಕಿತ್ತು ಎಸೆದುಬಿಟ್ಟನು. ಹೀಗೆ ಸಂತೋಷದಿಂದ ಆಡುತ್ತ ಹನುಮಂತನು ಮುನ್ನಡೆದನು. ಒಂದು ಮರವನ್ನೇರಿ ಕುಳಿತು ಉದ್ಯಾನದ ಚೆಲುವನ್ನು ನೋಡತೊಡಗಿದನು. ಆಗ ಹನುಮಂತನು ಸ್ವಲ್ಪ ದೂರದಲ್ಲೇ ಇರುವ ಒಂದು ಮರದ ಕಡೆಗೆ ನೋಡಿದನು. ಮಲಿನವಸನಗಳನ್ನು ಉಟ್ಟು ಬಾಡಿದ ಮೋರೆಯ ಮಂಗಲಮೂರ್ತಿಯೊಬ್ಬಳು ಆ ಮರದ ಬುಡದಲ್ಲಿ ಕುಳಿತಿದ್ದಳು. ಮಲಿನವಸ್ತ್ರಗಳನ್ನು ಉಟ್ಟಿ

ದ್ದರೂ ಆಕೆಯು ತೇಜೋರಾಶಿಯಾಗಿದ್ದಳು. ನಿಟ್ಟುಸಿರು ಬಿಡುತ್ತ ಅವಳು ನೆಲವನ್ನೇ ನೋಡುತ್ತಿದ್ದಳು. ತಲೆಗೂದಲು ಜಡೆಗಟ್ಟಿದೆ! ದೇಹವೆಲ್ಲ ಕೃಶವಾಗಿದೆ! ಆಕೆಯನ್ನು ನೋಡಿದ ಹನುಮಂತನು ಅವಳೇ ಸೀತೆಯೆಂದು ಬಗೆದನು. ಶ್ರೀರಾಮನು ಹೇಳಿದ ಕುರುಹುಗಳೆಲ್ಲವೂ ಅವಳಲ್ಲಿ ಇದ್ದುವು. ಶ್ರೀರಾಮನು ವರ್ಣಿಸಿದ ಸ್ತ್ರೀಮೂರ್ತಿಯೇ ಇವಳೆಂದು ಹನುಮಂತನಿಗೆ ಆನಂದವಾಯಿತು. ಇವಳೇ ಸೀತೆಯೆಂದು ನಿರ್ಧರಿಸಿದನು. ಸೀತೆಯ ಆ ಶೋಚನೀಯ ಸ್ಥಿತಿಯನ್ನು ನೋಡಿ ಹನುಮಂತನಿಗೂ ದುಃಖವಾಯಿತು. ಅವರಿಬ್ಬರೂ ಅನುರೂಪರಾದ ದಂಪತಿಗಳೆಂದು ಅವನು ಭಾವಿಸಿಕೊಂಡನು. ಅದಕ್ಕಾಗಿಯೇ ಅವರು ಒಬ್ಬರನ್ನೊಬ್ಬರು ಅಷ್ಟು ಚೆನ್ನಾಗಿ ಪ್ರೀತಿಸುತ್ತಿದ್ದಾರೆ. ಶ್ರೀರಾಮನನ್ನು ಸ್ಮರಿಸಿಕೊಂಡೇ ಸೀತೆ ಜೀವಿಸಿರುವುದೂ ಸೀತಾದೇವಿಗಾಗಿ ರಾಮನು ಅಷ್ಟು ಕಷ್ಟಗಳನ್ನು ಅನುಭವಿಸುತ್ತಿರುವುದೂ ಸ್ವಾಭಾವಿಕವೆಂದು ಹನುಮಂತನಿಗೆ ತೋರಿತು.

ಸೀತಾದೇವಿಯ ಸುತ್ತುಮುತ್ತಲೂ ಅನೇಕ ಮಂದಿ ಭೀಕರ ಆಕಾರದ ರಾಕ್ಷಸಿಯರು ಕುಳಿತಿದ್ದರು. ಅವರ ಆ ರೂಪಗಳನ್ನು ನೋಡಿ ಹನುಮಂತನಿಗೂ ಅಸಹ್ಯವಾಯಿತು.

ಅಷ್ಟುಹೊತ್ತಿಗೆ ರಾತ್ರಿಯ ಕಡೆಯ ಜಾವವಾಯಿತು. ರಾವಣನ ಅರಮನೆಯಲ್ಲಿ ಮಂಗಲವಾದ್ಯಗಳು ಮೊಳಗಿದುವು. ಬ್ರಹ್ಮರಾಕ್ಷಸರು ವೇದಪಠನಕ್ಕೆ ತೊಡಗಿದರು. ಆ ಘೋಷದಿಂದ ರಾವಣನು ಎದ್ದು ಕುಳಿತನು. ರಾತ್ರಿ ಹಗಲೆನ್ನದೆ ಸೀತೆಯ ಯೋಚನೆಯಲ್ಲೇ ಇದ್ದ ಆ ರಾಕ್ಷಸನು ಕನಸಿನಲ್ಲೂ ಸೀತೆಯನ್ನು ಕಾಣುತ್ತಿದ್ದನು. ಎದ್ದವನೇ ದಿವ್ಯವಾದ ಅಲಂಕಾರಗಳನ್ನು ಧರಿಸಿಕೊಂಡು ಅಶೋಕವನಕ್ಕೆ ಹೊರಟನು. ರಾಣಿವಾಸದ ನೂರಾರು ಹೆಣ್ಣುಗಳು ಅವನೊಂದಿಗೆ ಹೊರಟರು. ಕೆಲವರು ದೀವಟಿಗೆ ಹಿಡಿದುಕೊಂಡರು. ಕೆಲವರು ಚಾಮರ ಹಾಕತೊಡಗಿದರು. ಕೆಲವರು ಪಾನಪಾತ್ರೆಗಳನ್ನು ಹಿಡಿದುಕೊಂಡರು. ಕೆಲವರು ಆಯುಧಪಾಣಿಗಳಾಗಿ ರಾವಣನ ಅಂಗರಕ್ಷಕಿಯರಾದರು. ಇಂತಹ ವೈಭವದಿಂದ ರಾವಣನು ಅರಮನೆಯಿಂದ ಹೊರಟು ಅಶೋಕವನಕ್ಕೆ ಬಂದನು. ರೂಪದಿಂದಲೂ ಶೌರ್ಯದಿಂದಲೂ

ಹೊಳೆಯುತ್ತಿದ್ದ ರಾವಣನು ಹಿಮದಂತಹ ಬಿಳಿ ಬಟ್ಟೆಯನ್ನುಟ್ಟು ಮತ್ತಷ್ಟು ಹೊಳೆಯುತ್ತಿದ್ದನು. ವಸ್ತ್ರಕ್ಕೆ ತಕ್ಕ ಆಭರಣವನ್ನು ತೊಟ್ಟಿದ್ದನು. ಅವನು ಹೀಗೆ ಸರ್ವಾಂಗಸುಂದರನಾಗಿ ನಡೆದು ಬರುತಿದ್ದನು.

ಸೀತೆಯು ಕುಳಿತಿದ್ದ ಸ್ಥಳಕ್ಕೇ ರಾವಣನ ಪರಿವಾರವು ನೇರವಾಗಿ ಬಂತು. ಆ ವೈಭವವನ್ನು ನೋಡಿದ ಹನುಮಂತನಿಗೆ ಬಂದವನು ರಾವಣ ನೆಂದೇ ಖಚಿತವಾಯಿತು. ರಾವಣನು ತನ್ನೆಡೆಗೇ ಬರುತ್ತಿರುವನೆಂದು ತಿಳಿ ದೊಡನೆ ಸೀತೆಯು ಹುಲಿಯನ್ನು ಕಂಡ ಹುಲ್ಲೆಯಂತಾದಳು. ಆಕೆ ಶ್ರೀರಾಮ ನನ್ನೇ ಧ್ಯಾನಿಸಿದಳು. ತನ್ನ ಕುಲದೈವವನ್ನು ಮನಸ್ಸಿನಲ್ಲೇ ವಂದಿಸಿದಳು. ಈ ನರಕದಿಂದ ತನ್ನನ್ನು ಪಾರುಗೊಳಿಸೆಂದು ಪ್ರಾರ್ಥಿಸಿದಳು. ಸೀತಾದೇವಿಯ ಸಮೀಪಕ್ಕೆ ಬಂದ ರಾವಣನು ಒಮ್ಮೆ ಸುತ್ತುಮುತ್ತು ನೋಡಿದನು. ಕಾವ ಲಿನ ರಕ್ಕಸಿಯರು ಎದ್ದು ದೂರಸರಿದು ನಿಂತುಕೊಂಡರು. ರಾವಣನು ಸೀತೆ ಯನ್ನು ನೋಡಿ, ಮುಗುಳುನಗೆಯಿಂದ ಆಕೆಯನ್ನು ಮಾತನಾಡಿಸಿದನು. "ಸ್ತ್ರೀಯರಲ್ಲಿ ರತ್ನಪ್ರಾಯಳಾದ ಸೀತೆ, ನನ್ನನ್ನು ವರಿಸು. ರಾಮನ ಹಂಬಲ ಬಿಡು. ಕಾಡಿನಲ್ಲಿ ಅವನು ಈಗಾಗಲೇ ಹುಲಿಸಿಂಹಗಳ ಆಹಾರವಾಗಿರಬೇಕು. ಈ ಚಿಂತೆಯನ್ನು ಬಿಡು. ನನ್ನೊಡನೆ ಅರಮನೆಯನ್ನು ಸೇರಿ ಸುಖಸಾಮ್ರಾಜ್ಯ ದಲ್ಲಿ ನಲಿದಾಡು".

"ಧೂರ್ತ! ಈ ಲಂಕಾರಾಜ್ಯದಲ್ಲಿ ನಿನಗೆ ಬುದ್ಧಿಹೇಳುವವರು ಯಾರೂ ಇಲ್ಲವೆ ಹೋಯಿತೆ? ಪತಿಪ್ರಾಣೆಯಾದ ನಾನು ನಿನ್ನ ಭೋಗಸಾಮಗ್ರಿಗಳನ್ನು ಕಣ್ಣೆತ್ತಿ ಸಹ ನೋಡಲಾರೆ. ಈ ನಿನ್ನ ಸಿರಿಸಂಪತ್ತು ಶ್ರೀರಾಮನ ಪಾದ ಧೂಳಿಗೂ ಸರಿಯಲ್ಲ. ರಾವಣಾ! ನನ್ನ ಮಾತು ಕೇಳು. ಶ್ರೀರಾಮನು ಧರ್ಮಾತ್ಮನು. ನನ್ನನ್ನೊಯ್ದು ಅವನಿಗೊಪ್ಪಿಸಿ ಕ್ಷಮೆ ಬೇಡು. ಆ ಕರುಣಾ ಳುವು ನಿನ್ನನ್ನು ಕ್ಷಮಿಸುವನು. ಇಲ್ಲದಿದ್ದರೆ ನೀನೂ ಸಾಯುವೆ. ಲಂಕಾ ನಗರದ ರಕ್ಕಸರೂ ಸಾಯುವರು. ಲಂಕೆಯೇ ನಾಶವಾಗುವುದು" ಎಂದು ಸೀತೆಯು ಹೇಳಿದಳು.

"ಜಾನಕಿ! ಹಿತವನ್ನು ಹೇಳಿದರೆ ತಿರಸ್ಕರಿಸುವುದು ಹೆಣ್ಣು ಸ್ವಭಾವವಂತೆ. ನೀನೂ ಅಷ್ಟೇ ಸರಿ! ಇಂತಹ ಮಾತನ್ನು ಯಾರ ಮುಖದಿಂದಲೂ ಈ ರಾವಣ

ಕೇಳಿಲ್ಲ. ನನಗೇಕೊ ನಿನ್ನನ್ನು ಕಂಡರೆ ದಯೆ ಉಂಟಾಗುತ್ತದೆ. ಅದ್ದ ರಿಂದ ಈ ಬಾರಿ ನಿನ್ನನ್ನು ಜೀವದಿಂದಿರಲು ಬಿಡುವೆನು. ನಿನಗೆ ನಾನು ಕೊಟ್ಟ ಅವಧಿಯಲ್ಲಿ ಇನ್ನೆರಡು ತಿಂಗಳು ಮಾತ್ರ ಉಳಿದಿದೆ. ಅಷ್ಟರೊಳಗೆ ನೀನು ನನ್ನ ಅರಮನೆ ಸೇರಬೇಕು. ಜೋಕೆ?" ಎಂದು ಕೋಪದಿಂದಲೇ ರಾವಣನು ಹೇಳಿದನು. ಆ ಮಾತು ಕೇಳಿ ಅಲ್ಲಿದ್ದ ಹೆಂಗಸರೆಲ್ಲ ಸೀತೆಯು ಗತಿ ಏನಾಗುವುದೋ ಎಂದು ಹೆದರಿದರು. ಆದರೆ ಶ್ರೀರಾಮನ ಸತಿಯು ಮಾತ್ರ ಹೆದರಲಿಲ್ಲ. ಅವಳು ಧೈರ್ಯದಿಂದಲೇ ರಾವಣನನ್ನು ಎಚ್ಚರಿಸಿದಳು.

"ಅಯ್ಯೋ ರಾಕ್ಷಸಾ! ಶ್ರೀರಾಮಪತ್ನಿಯಾದ ನನ್ನೊಡನೆ ನೀನು ಆಡಿದ ಈ ಮಾತುಗಳಿಗೆ ತಕ್ಕ ಶಿಕ್ಷೆಯು ನಿನಗಾಗುವುದು. ಶ್ರೀರಾಮಚಂದ್ರನಿಲ್ಲಿಗೆ ಬಂದು ನಿನಗೆ ತಕ್ಕ ಶಿಕ್ಷೆಯನ್ನು ಕೊಡುವನು. ಅವನು ಬಾರದಿದ್ದರೆ ನನ್ನ ಪತಿವ್ರತಾ ಶಕ್ತಿಯೇ ನಿನ್ನನ್ನು ಸುಟ್ಟು ಭಸ್ಮಮಾಡೀತು. ನೀಚನೆ ಇಲ್ಲಿಂದ ಬೇಗನೆ ತೊಲಗು".

ಸೀತೆಯ ಮಾತು ಕೇಳಿ ರಾವಣನು ಕೋಪದಿಂದ ಕಿಡಿಕಿಡಿಯಾದನು. ಅವನು ಕೂಡಲೆ ದೂರಸರಿದು ನಿಂತ ರಕ್ಕಸಿಯರನ್ನು ಬಳಿಗೆ ಕರೆದನು. ಸೀತೆಯನ್ನು ಅವನ ವಶವಾಗುವಂತೆ ಮಾಡಿರೆಂದು ಸೂಚಿಸಿದನು. ಆಗಿನ ರಾವಣನ ಸ್ಥಿತಿಯನ್ನು ತಿಳಿದ ಧ್ಯಾನಮಾಲಿನಿ ಎಂಬುವಳು ಅವನನ್ನು ಸಮಾಧಾನಪಡಿಸುತ್ತ ತನ್ನ ಅಂತಃಪುರಕ್ಕೆ ಕರೆದೊಯ್ದಳು.

ರಾವಣನು ಅತ್ತ ಹೋದೊಡನೆ ಇತ್ತ ರಾಕ್ಷಸಿಯರು ಸೀತೆಯನ್ನು ಸುತ್ತುಗಟ್ಟಿ ನಿಂತರು. ಒಬ್ಬೊಬ್ಬರು ರಾವಣನ ಒಂದೊಂದು ಗುಣವನ್ನು ಹೇಳಿದರು. ಅವನ ರೂಪವನ್ನು ಬಣ್ಣಿಸಿದರು. ಸಂಪತ್ತನ್ನು ಶ್ಲಾಘಿಸಿದರು. ಅವರೇನು ಹೇಳಿದರೂ ಸೀತೆ ಅದಕ್ಕೆ ಕಿವಿಗೊಡಲಿಲ್ಲ. ಕೊನೆಗವರು ಸೀತೆಯನ್ನು ನಿಂದಿಸಿದರು. ಅದರೊಂದಿಗೆ ಶ್ರೀರಾಮನನ್ನೂ ನಿಂದಿಸಿದರು. ಅದನ್ನು ಕೇಳಿ ಸೀತಾದೇವಿಗೆ ಸಹಿಸಲಾಗಲಿಲ್ಲ. "ಅಯ್ಯೋ! ಈ ನಿಮ್ಮ ಮಾತನ್ನು ನಾನೆಂತು ಕೇಳಲಿ? ನೀವು ಬೇಕಾದರೆ ನನ್ನನ್ನು ಕಚ್ಚಿಕಚ್ಚಿ ತಿಂದು ಬಿಡಿ. ನಾನೆಂದಿಗೂ ನಿಮ್ಮ ಮಾತಿಗೆ ಒಪ್ಪಲಾರೆನು. ದರಿದ್ರನಾಗಲಿ ರಾಜ್ಯಭ್ರಷ್ಟನಾಗಲಿ ನನ್ನ ಪತಿಯು ನನ್ನ ಪಾಲಿನ ದೇವರು. ನಾನು ನನ್ನ ಪತಿಯನ್ನೇ

ಅನುಸರಿಸುವೆನು" ಎಂದು ಹೇಳಿದಳು. ಇದನ್ನು ಕೇಳಿದ ರಕ್ಕಸಿಯರು ಸೀತೆಯನ್ನು ಬೆದರಿಸತೊಡಗಿದರು. ಕರಾಳವಾಗಿ ಕೂಗಾಡುತ್ತ ಆಕೆಯನ್ನು ತಿಂದುಬಿಡುವೆವೆಂದರು. ಆಕೆಯನ್ನು ತಿಂದು ಮದ್ಯವನ್ನು ಕುಡಿದು ಗ್ರಾಮದೇವತೆಯ ಪ್ರೀತಿಗಾಗಿ ಕುಣಿಯೋಣವೆಂದರು.

ತಾಳ್ಮೆಯೇ ರೂಪುಗೊಂಡಂತಿರುವ ಸೀತೆಯ ಸಹನೆಯು ಮೀರಿ ಮೀರಿತು. ಆಕೆ ತಾಳ್ಮೆಗೆಟ್ಟಳು; ತಲ್ಲಣಗೊಂಡಳು! ಮನುಷ್ಯಸ್ತ್ರೀಯು ರಾಕ್ಷಸರ ಪತ್ನಿಯಾಗುವುದಾದರೂ ಉಂಟೇ? ಎಂದು ಸೀತೆಯು ಅವರನ್ನೇ ಕೇಳಿದಳು. "ನೀವು ನನ್ನನ್ನು ತಿನ್ನುವುದಾದರೆ ತಿಂದೇ ಬಿಡಿರಿ. ನನಗೆ ಜೀವಿಸುವ ಆಶೆಯೇ ಇಲ್ಲ" ಎನ್ನುವಾಗಲೇ ಸೀತೆಗೆ ದುಃಖವು ಉಕ್ಕಿಉಕ್ಕಿ ಬಂತು. "ಹಾ ರಾಮಾ! ಹಾ ಲಕ್ಷ್ಮಣಾ! ಎಂದು ಬಂಧುಗಳನ್ನು ಸ್ಮರಿಸುತ್ತ ಬಿಕ್ಕಿಬಿಕ್ಕಿ ಅತ್ತಳು. ಕೊನೆಯಲ್ಲಿ ತಾನು ಆತ್ಮಹತ್ಯೆ ಮಾಡಿಕೊಳ್ಳುವುದೇ ಒಳಿತೆಂದಳು. ಆದರೂ ಆ ರಾಕ್ಷಸಿಯರು ತಮ್ಮ ಮಾತನ್ನು ನಿಲ್ಲಿಸಲಿಲ್ಲ. ಅಷ್ಟರಲ್ಲಿ ತ್ರಿಜಟೆಯೆಂಬ ರಾಕ್ಷಸಿಯು ತಾನು ಆಗ ತಾನೇ ಕಂಡ ಕನಸನ್ನು ವಿವರಿಸಿದಳು. ಇದು ಆ ಕನಸಿನ ಕಥೆ.

"ಸೀತೆಯ ಗಂಡನಾದ ಶ್ರೀರಾಮನು ತನ್ನ ತಮ್ಮನಾದ ಲಕ್ಷ್ಮಣನೊಂದಿಗೆ ಬಿಳುಪಾದ ವಿಮಾನದಲ್ಲಿ ಕುಳಿತುಕೊಂಡು ಲಂಕಾನಗರಕ್ಕೆ ಬಂದನು. ಸೀತೆಯು ಅವರನ್ನು ಸೇರಿಕೊಂಡಳು. ಆ ದೃಶ್ಯವು ಮಾಯವಾಗಿ ಇನ್ನೊಂದು ದೃಶ್ಯವು ಕಾಣಿಸಿತು. ರಾಮಲಕ್ಷ್ಮಣರು ನಾಲ್ಕು ದಾಡೆಗಳಿರುವ ಬಿಳಿ ಆನೆಯ ಮೇಲೆ ಕುಳಿತುಕೊಂಡು ಲಂಕೆಗೆ ಬಂದರು. ಅವರು ಸೀತೆಯನ್ನೆತ್ತಿಕೊಂಡು ಆನೆಯ ಮೇಲಿರಿಸಿಕೊಂಡರು. ಅವರು ಕುಳಿತಿದ್ದ ಆನೆಯು ಲಂಕಾನಗರದ ಮೇಲೆಲ್ಲಾ ಹಾರಾಡಿತು. ಆಗ ಸೀತಾದೇವಿಯು ಸೂರ್ಯಚಂದ್ರರನ್ನು ತನ್ನೆರಡೂ ಕೈಗಳಲ್ಲಿ ಹಿಡಿದುಕೊಂಡು ಶೋಭಿಸಿದಳು. ಹಾಗೆಯೆ ಮತ್ತೊಂದು ದೃಶ್ಯವನ್ನು ಕಂಡೆನು. ರಾವಣನು ಮೈಗೆಲ್ಲ ಎಣ್ಣೆಯನ್ನು ಸವರಿಕೊಂಡು ಕೆಂಪುವಸ್ತ್ರವನ್ನುಟ್ಟುಕೊಂಡು ಗಹಗಹಿಸಿ ನಗುತಿದ್ದನು. ಅವನು ಕತ್ತೆಯನ್ನು ಹೂಡಿದ ರಥವನ್ನೇರಿ ದಕ್ಷಿಣದಿಕ್ಕಿಗೆ ಹೋಗುತಿದ್ದನು. ಹಾಗೆ ಹೋಗುತಿದ್ದಾಗ ಅವನು ಕೆಳಗೆ ಬಿದ್ದನು. ಅವನ ಮಕ್ಕಳೂ ಅವನಂತೆಯೇ ಅವನನ್ನು

ಹಿಂಬಾಲಿಸಿ ಹೋಗುತಿದ್ದರು. ಲಂಕೆಯ ಹೆಂಗಸರೂ ಎಣ್ಣೆ ಸವರಿಕೊಂಡು ಕೆಂಪುವಸ್ತ್ರ ಧರಿಸಿ ನಗರದಲ್ಲೆಲ್ಲ ಕುಣಿಯುತಿದ್ದರು. ವಿಭೀಷಣನು ಮಾತ್ರ ಬಿಳಿಬಟ್ಟೆಯುಟ್ಟು ತನ್ನ ನಾಲ್ಕು ಮಂದಿ ಮಂತ್ರಿಗಳೊಂದಿಗೆ ಆನೆಯನ್ನೇರಿ ಪ್ರಯಾಣಮಾಡುತಿದ್ದನು. ಈ ಘೋರ ಕನಸ್ಸನ್ನು ಕಂಡ ನನಗೇ ಭಯ ವಾಗುತ್ತಿದೆ. ಇದರ ಅರ್ಥವು ಭಯಂಕರವಾಗಿದೆ. ಶ್ರೀರಾಮನು ಬಂದು ರಾಕ್ಷಸರನ್ನೆಲ್ಲ ಕೊಲ್ಲುವುದು ಖಂಡಿತ. ಆದ್ದರಿಂದ ಸೀತೆಯನ್ನು ಗೋಳಿಡಿಸ ಬೇಡಿ. ಈಗಲೆ ಕ್ಷಮೆಬೇಡಿ ಬದುಕಿಕೊಳ್ಳಿರಿ".

ತ್ರಿಜಟೆಯ ಈ ಮಾತನ್ನು ಕೇಳಿದ ಆ ರಾಕ್ಷಸಿಯರಿಗೆ ಒಂದಿಷ್ಟು ಭಯ ವಾಯಿತು. ಅಷ್ಟರ ವರೆಗೂ ನಿದ್ದೆಯಿಲ್ಲದ ಅವರಿಗೆ ಆಗಲೆ ಗಾಢನಿದ್ರೆ ಬಂ ದಿತು. ಅವರೆಲ್ಲ ಅಲ್ಲಲ್ಲಿ ಬಿದ್ದು ನಿದ್ದೆಹೋದರು.

ಸೀತಾದೇವಿಯು ತನ್ನನ್ನು ತಾನೇ ನಿಂದಿಸಿಕೊಂಡು ತನ್ನ ಬಾಳನ್ನು ಕೊನೆಗೊಳಿಸುವುದು ಹೇಗೆಂದು ಯೋಚಿಸಿದಳು. ತನ್ನ ಉದ್ದವಾದ ಜಡೆ ಯನ್ನೇ ಕೊರಳಿಗೆ ಸುತ್ತಿಕೊಂಡು ಸಾಯುವುದೆಂದು ನಿರ್ಧರಿಸಿದಳು. ಅದೇ ತಲೆಗೂದಲ ರಾಶಿಯನ್ನು ಕೊರಳಿಗೆ ಬಿಗಿಯುವಾಗಲೆ ಅವಳ ಎಡಗಣ್ಣು ಅಲು ಗಿತು. ಅವಳ ವಾಮಭುಜವೂ ಅದುರಿತು. ಎಡತೊಡೆಯೂ ಅದುರಿತು. ಹೀಗೆ ಅವಳಿಗೆ ಶುಭಶಕುನಗಳಾದುವು. ಸೀತೆಗೆ ಮೊದಲಿನಿಂದಲೂ ಶಕುನ ದಲ್ಲಿ ನಂಬಿಕೆಯಿತ್ತು. ಎಷ್ಟೋ ವೇಳೆ ಆ ನಿಮಿತ್ತಗಳ ಫಲವನ್ನು ಅವಳು ಅನುಭವಿಸಿದ್ದಳು. ಆದ್ದರಿಂದ ಆತ್ಮಹತ್ಯೆಯ ಕೆಲಸವನ್ನು ನಿಲ್ಲಿಸಿದಳು. ಶ್ರೀ ರಾಮಚಂದ್ರನನ್ನು ಕಾಣುವೆನೆಂಬ ಭರವಸೆ ಮೂಡಿಬಂತು. ಈ ಯೋಚನೆ ಯೊಂದಿಗೆ ಮುಖದಲ್ಲಿ ನಗೆಯ ಎಸಳೊಂದು ಅರಳಿದಂತಾಯಿತು.

ಅಶೋಕವನದಲ್ಲಿ ಇದೆಲ್ಲವೂ ಆಗುತ್ತಿರುವಾಗ ಹನುಮಂತನು ಸಮೀ ಪದ ಶಿಂಶುಪಾವೃಕ್ಷದಲ್ಲೇ ಕುಳಿತಿದ್ದನು. ರಾಕ್ಷಸಿಯರೆಲ್ಲ ನಿದ್ದೆಹೋಗಿರುವ ಆ ಸಮಯದಲ್ಲೇ ತಾನು ಸೀತೆಗೆ ಕಾಣಿಸಿಕೊಳ್ಳಬೇಕು; ಆಕೆಯೊಂದಿಗೆ ಮಾತ ನಾಡಬೇಕು ಎಂದು ಯೋಚಿಸಿದನು. ತನ್ನ ಮಾತನ್ನು ಅವಳು ನಂಬದಿದ್ದರೆ ಅದೂ ತೊಂದರೆಗೆ ಕಾರಣವಾದೀತು. ಹೀಗೆಲ್ಲ ಹಲವು ರೀತಿಯಲ್ಲಿ ಯೋಚಿ ಸಿದನು. ಕೊನೆಗೆ ಅವನಿಗೊಂದು ಉಪಾಯ ಹೊಳೆಯಿತು. ಆ ಮರದ

ಮೇಲೆ ಕುಳಿತೇ ಶ್ರೀರಾಮನು ಕಳುಹಿಸಿದ ಸಂದೇಶವನ್ನು ಹೇಳಿ ಸೀತಾ
ದೇವಿಯ ಕಿವಿಗೆ ಬೀಳುವಂತೆ ಮಾಡುವುದು. ಆ ಮಾತುಗಳನ್ನು ಕೇಳಿ
ಅವಳು ಪ್ರಸನ್ನಳಾದಾಗ ಅವಳಿಗೆ ಕಾಣಿಸಿಕೊಳ್ಳುವುದು. ಹೀಗೆ ಯೋಚಿಸಿ
ದವನೇ ಇಂಪಾದ ಧ್ವನಿಯಲ್ಲಿ ಶ್ರೀರಾಮಸಂದೇಶವನ್ನು ಸೀತೆಗೆ ಕೇಳುವಷ್ಟು
ಗಟ್ಟಿಯಾಗಿ ಹೇಳತೊಡಗಿದನು.

“ಅಯೋಧ್ಯೆಯಲ್ಲಿ ಪುಣ್ಯಶಾಲಿಯಾದ ದಶರಥನು ರಾಜ್ಯವಾಳುತಿದ್ದನು.
ಅವನು ಮಹಾವೀರನು. ಅವನ ಮಗನು ಧನುರ್ಧಾರಿಗಳಲ್ಲಿ ಶ್ರೇಷ್ಠನಾದ
ಶ್ರೀರಾಮಚಂದ್ರನು. ತಂದೆಯ ಮಾತನ್ನು ಪಾಲಿಸುವುದು ಮಗನ ಧರ್ಮ
ವೆಂದು ಶ್ರೀರಾಮನು ಸತಿಯನ್ನೂ ಅನುಜನನ್ನೂ ಕರೆದುಕೊಂಡು ವನವಾಸಕ್ಕೆ
ಬಂದನು. ರಾಮನು ಕಾಡಿನಲ್ಲಿರುವಾಗ ಖರ ದೂಷಣರೇ ಮುಂತಾದ ರಾಕ್ಷ
ಸರನ್ನು ಕೊಂದನು. ಇದರಿಂದ ಕೋಪಗೊಂಡ ರಾವಣನು ಶ್ರೀರಾಮನಿಲ್ಲದ
ವೇಳೆಯಲ್ಲಿ ಸೀತೆಯನ್ನು ಕದ್ದುಕೊಂಡು ಲಂಕೆಗೆ ಹಾರಿದನು. ಸ್ನೇಹಮಯ
ನಾದ ಶ್ರೀರಾಮನು ಪ್ರಿಯಪತ್ನಿಯನ್ನು ಕಾಣದೆ ಕೊರಗುತ್ತ ಅಡವಿಯಲ್ಲಿ
ಅಲೆದನು. ಹಾಗೆ ಅಲೆಯುತ್ತಿರುವಾಗ ಅವನಿಗೆ ಕಪಿರಾಜನಾದ ಸುಗ್ರೀವನ
ಸ್ನೇಹವು ದೊರೆಯಿತು. ಮಹಾಶೂರನಾದ ಶ್ರೀರಾಮನು ಸುಗ್ರೀವನ ವೈರಿ
ಯಾದ ವಾಲಿಯನ್ನು ಕೊಂದು ಸುಗ್ರೀವನಿಗೆ ಕಿಷ್ಕಿಂಧೆಯ ಪಟ್ಟಗಟ್ಟಿದನು.
ಆ ಸುಗ್ರೀವರಾಜನ ಆಜ್ಞೆಯಂತೆ ಸಾವಿರಾರು ಕಪಿವೀರರು ಸೀತಾಮಾತೆ
ಯನ್ನು ಹುಡುಕುತ್ತಾ ಊರೂರು ಸಂಚರಿಸಿದರು. ನಾನೂ ಆ ಕಾರ್ಯ
ಕ್ಕಾಗಿಯೇ ಬಂದವನು. ಸಂಪಾತಿಯ ಮಾತಿನಂತೆ ಸಹಸ್ರಯೋಜನದ
ಸಾಗರವನ್ನು ದಾಟಿ ಇಲ್ಲಿಗೆ ಬಂದೆನು. ನನ್ನ ಭಾಗ್ಯದಿಂದ ಶ್ರೀರಾಮನು
ಹೇಳಿದ ರೂಪವರ್ಣಗಳು ಈ ದೇವಿಯಲ್ಲಿವೆ. ಆದ್ದರಿಂದ ಇವಳೇ ಸೀತಾ
ಮಾತೆಯು” ಎಂದು ಹೇಳಿ ಹನುಮಂತನು ಸುಮ್ಮನೆ ಕುಳಿತನು.

ಸೀತೆಗೆ ಈ ಮಾತುಗಳು ಆಶ್ಚರ್ಯವನ್ನೂ ಆನಂದವನ್ನೂ ಉಂಟು
ಮಾಡಿದುವು. ಸಾಯುವವನಿಗೆ ಅಮೃತ ಕುಡಿಸಿದಂತೆ ಆಕೆಗೆ ಆಯಿತು.
ಅವಳು ಆ ಸಂತೋಷದಿಂದಲೇ ಈ ಮಾತನ್ನಾಡಿದವರು ಯಾರೆಂದು ನೋಡಿ
ದಳು. ಅಲ್ಲೇ ಕುಳಿತಿದ್ದ ಹನುಮಂತನನ್ನು ಕಂಡು ಆಕೆಗೆ ಭಯವೂ ಆಶ್ಚ

ರ್ಯವೂ ಆಯಿತು. ಆದರೂ ಅವಳು ಕಂಗೆಡದೆ ಅವನನ್ನೇ ನೋಡುತ್ತಿದ್ದಳು. "ಈ ಕಪಿ ಯಾರೇ ಇರಲಿ. ಅವನಾಡಿದ ಮಾತುಗಳೆಲ್ಲ ಸತ್ಯವಾಗಲಿ" ಎಂದು ಹಾರೈಸಿದಳು. ಹನುಮಂತನು ಆಗ ಆಕೆಯ ಬಳಿಗೆ ಬಂದನು. ಭಯಭಕ್ತಿ ಗಳಿಂದ ಆಕೆಗೆ ಎರಗಿದನು.

"ತಾಯಿ! ನೀನಾರು? ನಿನ್ನ ಚರ್ಯೆಯಿಂದ ನೀನು ರಾಜಪುತ್ರಿಯಂತೆ ತೋರುವೆ. ರಾವಣನು ಕದ್ದುತಂದ ಸೀತಾದೇವಿಯು ನೀನೆಂದು ತಿಳಿಯಲೆ? ಅಮ್ಮಾ! ನಿನ್ನನ್ನು ನೋಡಿದರೆ ಶ್ರೀರಾಮಚಂದ್ರನ ಪತಿಯಂತೆ ತೋರುತ್ತಿದೆ. ನಿಜವನ್ನು ತಿಳಿಸು ತಾಯಿ".

ಹನುಮಂತನ ಮಾತು ಕೇಳಿ ಸೀತೆಗೆ ಸ್ವಲ್ಪ ಧೈರ್ಯಬಂತು. ಅವಳು ತಾನಾರೆಂಬುದನ್ನು ತಿಳಿಸಿದಳು. ತಂದೆಯ ಮಾತನ್ನು ಸಲ್ಲಿಸಲು ಕಾಡಿಗೆ ಬಂದಿದ್ದ ದಶರಥ ಮಹಾರಾಜನ ಸುಪುತ್ರನಾದ ಶ್ರೀರಾಮನೇ ತನ್ನ ಪತಿದೇವ ನೆಂದು ಹೇಳಿದಳು. ಸೀತಾರಾಮಲಕ್ಷ್ಮಣರು ಸಂತೋಷದಲ್ಲಿ ವನವಾಸ ಕಳೆ ಯುತ್ತಿರುವಾಗ ಧೂರ್ತನಾದ ರಾವಣನು ಬಂದು ಆಕೆಯನ್ನು ಕದ್ದುತಂದು ಅಲ್ಲಿರಿಸಿರುವುದನ್ನು ತಿಳಿಸಿದಳು. ಕೊನೆಯಲ್ಲಿ ರಾವಣನಿತ್ತ ಅವಧಿ ಇನ್ನೆರಡು ತಿಂಗಳಲ್ಲಿ ಮುಗಿಯುವುದೆಂದೂ ಅನಂತರ ಆಕೆ ಜೀವಿಸಿರುವುದು ಕಷ್ಟವೆಂದೂ ತನ್ನ ಗೋಳನ್ನು ಹೇಳಿದಳು. ಹನುಮಂತನು ತಾನು ರಾಮದೂತನೆಂದು ತಿಳಿಸಿದನು. ಅವರು ಮಾತನಾಡುತ್ತಿರುವಾಗ ಹನುಮಂತನು ಸ್ವಲ್ಪಸ್ವಲ್ಪ ವಾಗಿ ಸೀತೆಯ ಸಮೀಪಕ್ಕೆ ಬರುತ್ತಿದ್ದನು. ಇದನ್ನು ತಿಳಿದ ಸೀತೆಯು ಫಕ್ಕನೆ ಕುಸಿದುಕುಳಿತಳು. ಅವನು ರಾವಣನೇ ಇರಬೇಕೆಂದೂ ತನ್ನನ್ನು ವಂಚಿ ಸಲು ಕಪಿರೂಪದಿಂದ ಬಂದಿರುವನೆಂದೂ ಸಂಶಯಗೊಂಡಳು. ಸೀತೆಯ ಸ್ಥಿತಿಯನ್ನು ನೋಡಿ ಹನುಮಂತನಿಗೆ ಕನಿಕರವಾಯಿತು. ಅವನು ಅವಳೆ ದುರು ಉದ್ದಂಡ ನಮಸ್ಕಾರಮಾಡಿದನು. ಇದರಿಂದ ಸೀತೆಗಿಷ್ಟು ಸಮಾಧಾನ ವಾಯಿತು. ಆಗ ಹನುಮಂತನು ಅವಳ ಮನೋಗತವನ್ನು ತಿಳಿದು ರಾಮ ನನ್ನು ಬಣ್ಣಿಸತೊಡಗಿದನು.

"ಅಮ್ಮಾ! ಶ್ರೀರಾಮನು ಸೂರ್ಯನಂತೆ ತೇಜಸ್ವಿ; ಚಂದ್ರನಂತೆ ಮನೋ ಹರ; ವಿಷ್ಣುವಿನಂತೆ ಪರಾಕ್ರಮಶಾಲಿ; ಮನ್ಮಥನಂತಹ ಚೆಲುವು ಉಳ್ಳವನು;

ಗುಣದಲ್ಲಿ ಬಲದಲ್ಲಿ ಅವನಿಗೆ ಅವನೇ ಸಮಾನನು. ಅಂತಹ ಶ್ರೀರಾಮ ದೇವನ ದೂತನು ನಾನು. ನನ್ನನ್ನು ಹನುಮಂತನೆಂದು ಕರೆಯುತ್ತಾರೆ. ನಾನು ಸುಗ್ರೀವರಾಜನ ಮಂತ್ರಿ. ನಾನು ನಿನ್ನನ್ನು ಹುಡುಕಲೆಂದೇ ಸಾಗರ ವನ್ನು ಹಾರಿ ಬಂದಿರುವೆನು. ನನ್ನನ್ನು ರಾವಣನೆಂದು ಶಂಕಿಸಬೇಡ" ಎಂದು ಮತ್ತೂ ಮತ್ತೂ ಬೇಡಿಕೊಂಡನು.

ಆಗ ಸೀತೆಯ ಸಂಶಯವು ಅಡಗಿತು. ಆಕೆಗೆ ಸಂತೋಷವಾಯಿತು. ಶ್ರೀರಾಮನಿಗೂ ಹನುಮಂತನಿಗೂ ಸ್ನೇಹವಾದುದು ಹೇಗೆಂದು ಮಾರುತಿ ಯೊಡನೆ ಸೀತೆಯು ಪ್ರಶ್ನಿಸಿದಳು. ರಾಮಲಕ್ಷ್ಮಣರ ರೂಪು ಹೇಗಿದೆಯೆಂದು ವರ್ಣಿಸಲು ಇನ್ನೊಮ್ಮೆ ಕೇಳಿಕೊಂಡಳು. ಹನುಮಂತನು ಅವಳಿಗೆ ಸಮಾ ಧಾನವಾಗಲೆಂದೇ ರಾಮಲಕ್ಷ್ಮಣರ ಸುಂದರರೂಪವನ್ನು ವರ್ಣಿಸಿದನು.

"ಅಮ್ಮಾ! ಶ್ರೀರಾಮದೇವನು ಸರ್ವಾಂಗಸುಂದರನು. ಅವನಿಗೆ ಕಮಲಪತ್ರದಂತಹ ಕಣ್ಣುಗಳು. ವಿಶಾಲವಾದ ಭುಜಗಳು. ದೀರ್ಘವಾದ ತೋಳುಗಳು. ಕಾಂತಿಯಿಂದ ಹೊಳೆವ ಮುಖ. ಗಂಭೀರವಾದ ಧ್ವನಿ. ಮನೋಹರವಾದ ಮಾತಗಳು. ಬಲಿಷ್ಠವಾದ ಎದೆ, ಮಣಿಬಂಧ ಮತ್ತು ಹಿಡಿಗಳು. ಕೆಂಪಗಿರುವ ಕಡೆಗಣ್ಣು, ಉಗುರು ಮತ್ತು ಅಂಗೈಗಳು. ಧರ್ಮ ಪರಾಯಣನು. ವೇದಗಳಲ್ಲಿ ಪಾರಂಗತನು. ಬ್ರಹ್ಮಚರ್ಯೆ ಉಳ್ಳವನು. ವಿನಯಸಂಪನ್ನನು. ಮಹಾ ಸತ್ವಶಾಲಿಯು. ಅಪಾರವಾದ ಕರುಣೆಯುಳ್ಳ ವನು. ಶ್ರೀರಾಮನ ಸೋದರನಾದ ಲಕ್ಷ್ಮಣನೂ ಅವನಂತೆಯೇ ರೂಪಗುಣ ಸಂಪನ್ನನು. ಅವರಿಬ್ಬರೂ ನಿನ್ನನ್ನು ಹುಡುಕಿಕೊಂಡು ತಿರುಗಾಡುತ್ತಿರುವಾಗ ನನಗೆ ಅವರ ಸ್ನೇಹವಾಯಿತು. ಆ ಸ್ನೇಹದ ಫಲವಾಗಿಯೇ ನಾನಿಲ್ಲಿಗೆ ನಿನ್ನನ್ನು ಹುಡುಕುತ್ತ ಬಂದೆನು. ನಿನ್ನನ್ನು ಕಂಡು ನನ್ನ ಆಯಾಸವೆಲ್ಲ ಹಾರಿಹೋಯಿತು".

ರಾಮಲಕ್ಷ್ಮಣರ ಈ ವಾರ್ತೆಯನ್ನು ಕೇಳಿ ಸೀತೆಗೆ ಸಂತೋಷವಾ ಯಿತು. ಮನಸ್ಸು ಚೇತನಗೊಂಡಿತು. ಮುಖ ಪ್ರಸನ್ನವಾಯಿತು. ಇದನ್ನು ಕಂಡು ಹನುಮಂತನು ಮುಂದೆ ಹೋಗಿ ತಾನು ತಂದಿದ್ದ ಶ್ರೀರಾಮಚಂದ್ರನ ಮುದ್ರೆಯುಂಗುರವನ್ನು ಆಕೆಯ ಕೈಗಿತ್ತನು. "ಅಮ್ಮಾ! ಈಗಲಾದರೂ ತಮ್ಮ

ಸಂಶಯ ನಿವಾರಣೆಯಾಯಿತೆ? ನಾನು ವಾನರನೂ ರಾಮದೂತನೂ ಎಂದು ನಿಮಗೆ ನಂಬಿಕೆ ಬಂತೇ?" ಎಂದು ಹೇಳುತ್ತಾ ಆಕೆ ಬಿಸಾಡಿದ ಆಭರಣ ಗಳನ್ನು ಕಪಿಗಳು ಶ್ರೀರಾಮನ ಕೈಗಿತ್ತುದನ್ನೂ ಅದನ್ನು ಕಂಡು ಅವನು ಸೀತೆಗಾಗಿ ದುಃಖಿಸಿದುದನ್ನೂ ತಿಳಿಸಿದನು. ಆ ಉಂಗುರವನ್ನು ನೋಡಿದ ಸೀತೆಗೆ ಸಾಕ್ಷಾತ್ ಶ್ರೀರಾಮಚಂದ್ರನನ್ನೇ ಕಂಡಷ್ಟು ಸಂತೋಷವಾಯಿತು. ಶ್ರೀರಾಮನೆಂತಹ ಸ್ನೇಹಮಯನೆಂದೂ ತನ್ನ ಅಗಲುವಿಕೆಗೆ ರಾಮನೆಷ್ಟು ನೊಂದನೋ ಎಂದು ಭಾವಿಸಿ ತಾನೂ ನೊಂದುಕೊಂಡಳು. ಆ ಮೇಲೆ ಹನುಮಂತನನ್ನು ಸ್ನೇಹಾದರಗಳಿಂದ ನೋಡಿದಳು. ತಾನು ಈ ಮಹಾ ಸತ್ವನನ್ನು ರಾವಣನೆಂದು ಶಂಕಿಸಿದೆನಲ್ಲಾ ಎಂದು ತನಗೆ ತಾನೇ ನಾಚಿಕೊಂ ಡಳು. ಆಕೆಗೆ ಹನುಮಂತನೊಡನೆ ಶ್ರೀರಾಮನ ಕುರಿತು ಮತ್ತೂ ಮಾತ ನಾಡಬೇಕೆನಿಸಿತು.

"ಮಾರುತಿ! ನೀನು ಮಹಾಸತ್ವನೇ ಸರಿ. ಶ್ರೀರಾಮಲಕ್ಷ್ಮಣರ ವಾರ್ತೆ ಯನ್ನು ತಂದ ನೀನು ನನಗೆ ನಿಜವಾಗಿಯೂ ಪುಣ್ಯಸ್ವರೂಪನು. ಶ್ರೀರಾಮ ನಿಗೆ ನನ್ನ ಕಷ್ಟವನ್ನು ತಿಳಿಸು. ಅವನು ಬೇಗನೇ ಬಂದು ನನ್ನನ್ನು ಬಿಡಿಸಿ ಕೊಂಡು ಹೋಗುವಂತೆ ಹೇಳು".

"ಅಮ್ಮಾ! ನೀನದಕ್ಕಾಗಿ ಚಿಂತಿಸಬೇಡ. ಶ್ರೀರಾಮನು ಮಹಾಸೈನ್ಯ ದೊಡನೆ ಬಂದು ನಿನ್ನನ್ನು ಬಿಡುಗಡೆಮಾಡುವನು. ಈ ದುಷ್ಟರಾವಣನನ್ನೂ ಅವನ ಪರಿವಾರವನ್ನೂ ಕೊಂದಿಕ್ಕುವನು" ಎಂದು ಹನುಮಂತನು ಹೇಳಿದನು.

"ಆದರೆ ಸಮುದ್ರದ ಮಧ್ಯದಲ್ಲಿರುವ ಈ ಲಂಕೆಗೆ ಶ್ರೀರಾಮನು ಬರು ವುದು ಸಾಧ್ಯವೇ? ಅವನೆಂದು ಬರುವನೋ?" ಎಂದು ಸೀತೆಗೆ ಸಂದೇಹವಾ ಯಿತು. ಆಗ ಹನುಮಂತನು "ಅಮ್ಮಾ! ಅಷ್ಟುಕಾಲ ತಾಳಲಾರೆಯಾದರೆ ಈಗಲೇ ನನ್ನ ಹೆಗಲೇರು. ಈ ಸಾಗರವನ್ನು ಹಾರಿ ನಿನ್ನನ್ನು ಈಗಲೇ ರಾಮನೆಡೆಗೆ ಒಯ್ಯುವೆನು" ಎಂದು ಉತ್ಸಾಹ ತೋರಿದನು. ಇದನ್ನು ಕೇಳಿ ಸೀತೆಗೆ ನಗು ಬಂತು. ಆ ಕಪಿ ತನ್ನನ್ನು ಹೆಗಲೇರಿಸಿಕೊಂಡು ಹಾರುವ ದುಂಟೇ ಎಂದವಳು ಭಾವಿಸಿದಳು. ಸೀತೆಯ ನಗೆಯನ್ನು ಕಂಡ ಮಾರುತಿಯು ಈಕೆಗೆ ತನ್ನ ನಿಜರೂಪವನ್ನು ತೋರುವೆನೆಂದು ನಿಂತಲ್ಲಿಂದ ಸ್ವಲ್ಪ ದೂರಕ್ಕೆ

ನೆಗೆದು ಬೆಳೆಯುತೊಡಗಿದನು. ಅವನ ಆ ರೂಪವನ್ನು ಕಂಡು ಹನುಮಂತನು ಮಹಾಶಕ್ತಿವಂತನೆಂದು ಸೀತೆಗೆ ನಂಬಿಕೆ ಹುಟ್ಟಿತು. ಆದರೆ ಅವಳು ಅವನೊಂದಿಗೆ ಹೋಗಲು ಒಪ್ಪಲಿಲ್ಲ. ಅವಳು ಹಾಗೆ ಹೋಗುವುದು ಯಾವ ರೀತಿಯಲ್ಲೂ ಸರಿಯಲ್ಲವೆಂದು ನಿಶ್ಚಯಿಸಿದಳು.

"ಆಂಜನೇಯ! ನೀನು ವಾಯುವೇಗದಿಂದ ಹೋಗಿ ಶ್ರೀರಾಮನನ್ನೇ ಇಲ್ಲಿಗೆ ಕರೆದುತರುವ ಯತ್ನಮಾಡು. ನನ್ನನ್ನು ಇಲ್ಲಿಂದ ಬಿಡುಗಡೆಮಾಡುವ ಭಾರವು ನಿನ್ನನ್ನೇ ಸೇರಿದೆ".

ಆಕೆಯ ಮಾತನ್ನು ಕೇಳಿ, ಹನುಮಂತನು ಅವಳಿಗೆ ತಕ್ಕ ಭರವಸೆಯಿತ್ತನು. "ಅಮ್ಮಾ! ನಾನು ನಿನ್ನನ್ನು ಕಂಡು ಮಾತನಾಡಿದೆನೆಂದು ಶ್ರೀರಾಮನಿಗೆ ಗುರುತು ತೋರಿಸಲು ಏನನ್ನಾದರೂ ಕೊಡು" ಎಂದು ಬೇಡಿಕೊಂಡನು. ಆಗ ಸೀತೆಯು ಚಿತ್ರಕೂಟ ಪರ್ವತದ ಸಮೀಪದಲ್ಲಿ ಮಂದಾಕಿನೀ ತೀರದಲ್ಲಿರುವ ಉಪವನದಲ್ಲಿ ಜರಗಿದ ಒಂದು ಘಟನೆಯನ್ನು ಆಂಜನೇಯನೊಡನೆ ಹೇಳಿದಳು. ಇಂದ್ರನ ಮಗನು ಕಾಗೆಯ ವೇಷದಿಂದ ಬಂದು ಸೀತೆಗೆ ತೊಂದರೆಕೊಟ್ಟುದೂ ಅದರ ಮೇಲೆ ಶ್ರೀರಾಮನು ಮಂತ್ರಾಸ್ತ್ರವನ್ನು ಪ್ರಯೋಗಿಸಿದ್ದೂ ಅವರಿಬ್ಬರಿಗೇ ಗೊತ್ತಿದ್ದ ಕಥೆ. ಅದನ್ನು ತನ್ನ ಗುರುತಿಗಾಗಿ ಶ್ರೀರಾಮನಿಗೆ ಹೇಳು ಎಂದಳು. "ಕಾಗೆಗಾಗಿ ಬ್ರಹ್ಮಾಸ್ತ್ರ ಪ್ರಯೋಗಿಸಿದವನು ಈ ರಾವಣನನ್ನು ಕ್ಷಮಿಸುವುದೇ? ಕೂಡಲೇ ಬಂದು ನನ್ನನ್ನು ಉದ್ಧರಿಸಬೇಕೆಂದು ಶ್ರೀರಾಮನಿಗೆ ಹೇಳು" ಎಂದಳು. ಆ ಮೇಲೂ ಶ್ರೀರಾಮಲಕ್ಷ್ಮಣರ ವಿಚಾರದಲ್ಲಿ ಮಾತನಾಡಿದಳು. ತನ್ನನ್ನು ಅವರು ಕ್ಷಮಿಸಬೇಕೆಂದು ಮಾರುತಿಯು ಅವರೊಡನೆ ಹೇಳಬೇಕೆಂದಳು. ಕೊನೆಗೆ ತನ್ನ ಚೂಡಾಮಣಿಯನ್ನು ಹನುಮಂತನ ಕೈಯ್ಯಲ್ಲಿ ಇಟ್ಟಳು. ಹನುಮಂತನು ಅದನ್ನು ತೆಗೆದುಕೊಂಡು ಸೀತಾದೇವಿಗೆ ಪ್ರದಕ್ಷಿಣೆ ಬಂದು ನಮಸ್ಕಾರಮಾಡಿದನು. ಸೀತೆ ಅವನನ್ನು ಹರಸಿದಳು. "ರಾಮಲಕ್ಷ್ಮಣರಿಗೆ ನನ್ನ ಕ್ಷೇಮವನ್ನು ತಿಳಿಸು. ನಿನಗೆ ಮಾರ್ಗದಲ್ಲಿ ವಿಘ್ನಗಳು ಸಂಭವಿಸದಿರಲಿ. ನಿನಗೆ ಮಂಗಲವಾಗಲಿ" ಎಂದು ಅವನನ್ನು ಬೀಳ್ಕೊಟ್ಟಳು. ಹನುಮಂತನು ಮತ್ತೊಮ್ಮೆ ಆಕೆಗೆ ವಂದಿಸಿ ಅಲ್ಲಿಂದ ಹೊರಟನು.

ಅಶೋಕವನದಿಂದ ಹೊರಗೆ ಬರುತ್ತಿರುವಾಗ ಆಂಜನೇಯನಿಗೊಂದು ಯೋಚನೆ ಹೊಳೆಯಿತು. "ಲಂಕೆಗೆ ಬಂದ ನಾನು ಸೀತೆಯನ್ನು ನೋಡಿದೆ. ರಾವಣನನ್ನೂ ನೋಡಿದೆ. ಅವನ ಬಲಾಬಲವನ್ನೂ ತಿಳಿಯಬೇಕು. ಇದಕ್ಕೇನು ಮಾಡಲಿ? ಈ ವನವನ್ನು ಪುಡಿಮಾಡಿದರೆ ರಾವಣನ ಕಡೆಯವರು ಬಂದಾರು. ಮುಂದೆ ಏನಾದೀತೆಂದು ನೋಡುವ" ಎಂದು ಯೋಚಿಸಿದವನೇ ಮರಗಳನ್ನು ಹಾರಿಹಾರಿ ಮುರಿದು ಮುರಿದು ರಾಶಿ ಹಾಕಿದನು. ಅಷ್ಟರಲ್ಲಿ ಅಶೋಕವನದಲ್ಲಿ ಕಾವಲಿದ್ದ ರಾಕ್ಷಸಿಯರಿಗೆ ಎಚ್ಚರವಾಯಿತು. ಅವರಿವನ್ನು ನೋಡಿ ಭಯದಿಂದ ನಡುಗಿದರು. ಅವರು ಸೀತೆಯನ್ನು ವಿಚಾರಿಸಿದರು. ಅವಳು ತನಗದು ತಿಳಿಯದು, ಯಾರೋ ರಾಕ್ಷಸರಿರಬೇಕು ಎಂದು ಸುಮ್ಮನಾದಳು. ಅವರಲ್ಲಿ ಕೆಲವರು ಓಡಿಹೋಗಿ ರಾವಣನಿಗೆ ಈ ಸುದ್ದಿ ಹೇಳಿದರು. ಅದನ್ನು ಕೇಳಿದೊಡನೆ ರಾವಣನು ಕೋಪದಿಂದ ಕೆಂಡವಾದನು. ಕಿಂಕರರೆಂಬ ರಾಕ್ಷಸರನ್ನು ಕರೆದು ಆ ಕೋತಿಯನ್ನು ಬಲಿಹಾಕಲು ಅಪ್ಪಣೆಯಿತ್ತನು. ಕೋತಿಯನ್ನು ಹಿಡಿದುತರುವೆವೆಂದು ಬಿಂಕದಿಂದ ಬಂದ ಆ ಕಿಂಕರರು ಕೋತಿಯಿಂದ ಹತರಾದರು. ಕಿಂಕರರು ಸತ್ತರೆಂದು ತಿಳಿದೊಡನೆ ರಾವಣನು ತನ್ನ ಮಂತ್ರಿ ಪ್ರಹಸ್ತನ ಮಗ ಜಂಬುಮಾಲಿಯನ್ನು ಕಳುಹಿಸಿದನು. ಹನುಮಂತನು ಜಯಘೋಷಮಾಡುತ್ತ ಜಂಬುಮಾಲಿಗೆ ಎದುರಾದನು. ಮಹಾಶೂರನಾದ ಜಂಬುಮಾಲಿಯನ್ನೂ ಅವನ ಸಾರಥಿ ರಥಾದಿಗಳನ್ನೂ ಹನುಮಂತನು ಬಡಿದುಬಡಿದು ಚೂರುಚೂರು ಮಾಡಿದನು. ಜಂಬುಮಾಲಿ ಮಡಿದನೆಂದು ಕೇಳಿದಾಗ ರಾವಣನಿಗೆ ಮತ್ತಷ್ಟು ಕೋಪವೇರಿತು. ಅವನು ಕೂಡಲೆ ಪ್ರಹಸ್ತಸುತನ ಸಮಬಲರಾದ ಏಳುಮಂದಿ ಮಂತ್ರಿಸುತರನ್ನು ಅಶೋಕವನಕ್ಕೆ ಕಳುಹಿಸಿದನು. ಗರ್ವದಿಂದ ಬರುತ್ತಿರುವ ಆ ಏಳುಮಂದಿಯನ್ನೂ ಹನುಮಂತನು ದೂರದಿಂದಲೆ ನೋಡಿದನು. ಸಿಂಹನಾದ ಮಾಡುತ್ತ ಬಂದ ಆ ರಾಕ್ಷಸರಲ್ಲಿ ಒಬ್ಬೊಬ್ಬರನ್ನೇ ಕೊಂದಿಕ್ಕಿದನು.

ಏಳುಮಂದಿ ಮಂತ್ರಿಪುತ್ರರೂ ಮಡಿದರೆಂದು ಕೇಳಿದಾಗ ರಾವಣನ ಕೋಪವಿಳಿಯಿತು. ಅವನು ಕ್ಷಣಕಾಲ ಯೋಚಿಸಿದನು. ಯೂಪಾಕ್ಷನೇ ಮೊದಲಾದ ಐವರು ಸೇನಾಪತಿಗಳನ್ನು ಕೂಡಲೇ ಕರೆಯಿಸಿದನು. ಅಶೋಕವನದಲ್ಲಿರುವ ಕಪಿಯೊಡನೆ ಕಾದಾಡಿ ಅದನ್ನು ಸಂಹರಿಸಿಬರಲು ಅಪ್ಪಣೆ

ಯಿತ್ತನು. ಆ ಸೇನಾಪತಿಗಳು ತಮ್ಮ ಸೇನೆಯೊಂದಿಗೆ ಬಂದು ಹನುಮಂತ ನನ್ನು ಮುತ್ತಿಕೊಂಡರು. ಆಗ ಹನುಮಂತನು ಒಂದು ದೊಡ್ಡ ಮರವನ್ನೇ ಕಿತ್ತುಕೊಂಡು ಅವರನ್ನು ಅಪ್ಪಳಿಸಿದನು. ಅವರೆಲ್ಲರೂ ಹತರಾಗುವಾಗ ಹನುಮಂತನ ಮೈಯೆಲ್ಲ ರಕ್ತಮಯವಾಗಿತ್ತು. ತನ್ನ ಶೂರರಾದ ಸೇನಾ ಪತಿಗಳು ಐವರೂ ಮಡಿದರೆಂಬ ವಾರ್ತೆಯನ್ನು ಕೇಳಿ ರಾವಣನು ಚಿಂತಾ ಮಗ್ನನಾದನು. ಆ ಚಿಂತೆಯಿಂದ ಭಾರವಾದ ತಲೆಯನ್ನೆತ್ತಿ ತನ್ನ ಇದಿರಲ್ಲೇ ಕುಳಿತಿದ್ದ ಅಕ್ಷಕುಮಾರನನ್ನು ನೋಡಿದನು. ಅಕ್ಷಕುಮಾರನಿಗೆ ತಂದೆಯ ಅಭೀಷ್ಟವೇನೆಂದು ಹೊಳೆಯಿತು. ಅವನು ಕೂಡಲೇ ಎದ್ದು ಹನುಮಂತ ನೊಡನೆ ಯುದ್ಧಮಾಡಲು ಸಿದ್ಧನಾದನು. ಅಕ್ಷಕುಮಾರನು ಎಂಟು ಕುದುರೆ ಗಳನ್ನು ಜೋಡಿಸಿದ ರಥದಲ್ಲಿ ಕುಳಿತು ಮಾರುತಿ ಇದ್ದಲ್ಲಿಗೆ ಬಂದನು. ಆದರೆ ಮಾರುತಿಯು ಮಾತ್ರ ಕುಳಿತಲ್ಲಿಂದ ಏಳಲೇ ಇಲ್ಲ. ಅಕ್ಷಕುಮಾರನು ಕೂಡಲೇ ಮೂರು ಬಾಣಗಳನ್ನು ಹೊಡೆದು ಹನುಮಂತನನ್ನು ಕೆರಳಿಸಿದನು. ಭಯಂ ಕರವಾದ ಕಾಳಗವಾಯಿತು. ಅಕ್ಷಕುಮಾರನ ಸಮರಸಾಮರ್ಥ್ಯವು ಅಷ್ಟಿ ಷ್ಟಲ್ಲ. ಹನುಮಂತನಿಗೆ ಅದು ತಿಳಿಯಿತು. ಅವನು ಕೂಡಲೇ ಅಕ್ಷಕುಮಾ ರನ ರಥವನ್ನೂ ತುರಗಗಳನ್ನೂ ಪುಡಿಮಾಡಿದನು. ಅಕ್ಷಕುಮಾರನು ಕೆಲಕ್ಕೆ ನೆಗೆದು ಹನುಮಂತನ ಮೇಲೆ ಬಿದ್ದನು. ಹನುಮಂತನು ಅವನ ಕಾಲುಗಳನ್ನು ಹಿಡಿದೆತ್ತಿ ನೆಲಕ್ಕಪ್ಪಳಿಸಿದನು. ಅಕ್ಷಕುಮಾರನಿಂತು ಜರ್ಜರಿತವಾಗಿ ಹತ ನಾದನು.

ಅಕ್ಷಕುಮಾರನ ಮರಣವಾರ್ತೆಯಿಂದ ರಾವಣನು ಅತಿಯಾಗಿ ದುಃಖಿ ಸಿದನು. ಆ ದುಃಖದ ಆವೇಗದಲ್ಲೇ ಇಂದ್ರಜಿತುವನ್ನು ಕರೆದು, ಆ ವರಿ ಗಾದುದನ್ನು ಹೇಳಿದನು. "ಆ ವಾನರನು ಸಾಮಾನ್ಯನಲ್ಲ. ಮಂತ್ರಾಸ್ತ್ರ ಗಳಲ್ಲಿ ಸಮರ್ಥನಾದ ನೀನೇ ಹೋಗಿ ವಿಜಯಿಯಾಗಿ ಬರಬೇಕು" ಎಂದನು. ಇಂದ್ರಜಿತು ತಂದೆಯ ಅಪ್ಪಣೆಯಂತೆ ರಣೋತ್ಸಾಹದಿಂದ ರಥವನ್ನೇರಿ ಮುನ್ನ ಡೆದನು. ಹನುಮಂತನು ಅವನ ಠೀವಿಯನ್ನು ನೋಡಿ ತಾನೂ ಉಬ್ಬಿ ಬೆಳೆದು ನಿಂತುಕೊಂಡನು. ಇಂದ್ರಜಿತು ತನ್ನ ಕರಕೌಶಲ್ಯವನ್ನು ಬಾಣ ಪ್ರಯೋಗದಲ್ಲಿ ತೋರಿಸಿದನು. ಆ ಬಾಣಗಳಿಂದ ತಪ್ಪಿಸಿಕೊಳ್ಳುವ ಸಾಮ ರ್ಥ್ಯವನ್ನು ಹನುಮಂತನೂ ತೋರಿದನು. ಹೀಗೆ ಕಲಾಪೂರ್ಣವಾದ ಕಾಳ

ಗವು ಕಡೆಗೆ ಕಠಿಣವಾಯಿತು. ಕೊನೆಯಲ್ಲಿ ಇಂದ್ರಜಿತುವು ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸಿ ಪ್ರಯೋಗಿಸಿದನು. ಬ್ರಹ್ಮಾಸ್ತ್ರವನ್ನು ಗೌರವಿಸಬೇಕೆಂದು ಮಾರುತಿಯು ಯೋಚಿಸಿ ಅಸ್ತ್ರದ ಬಂಧನಕ್ಕೊಳಗಾಗಿ ನೆಲಕ್ಕೆ ಬಿದ್ದನು.

ಹನುಮಂತನು ಬಿದ್ದುದನ್ನು ನೋಡಿ ರಾಕ್ಷಸರು ಅಟ್ಟಹಾಸದಿಂದ ಅವನನ್ನು ಬೆದರಿಸಿದರು. ಅವನ ಕೈಕಾಲುಗಳನ್ನು ಹಗ್ಗದಿಂದ ಕಟ್ಟಿದರು. ರಾವಣನನ್ನು ಕಾಣಬೇಕೆಂದಿದ್ದ ಮಾರುತಿಯು ಮೌನವಾಗಿದ್ದನು. ರಾಕ್ಷಸರು ಅವನನ್ನು ಎಳೆದುಕೊಂಡು ಬಂದು ರಾವಣನ ಮುಂದೆ ನಿಲ್ಲಿಸಿದರು.

ಹನುಮಂತನು ವೈಭವದಿಂದ ಕೂಡಿದ ರಾವಣನ ಸಭೆಯನ್ನು ನೋಡಿದನು. ತೇಜಸ್ವಿಯಾದ ರಾವಣನು ಸಭಾಮಧ್ಯದಲ್ಲಿ ಗಂಭೀರವಾಗಿ ಕುಳಿತಿದ್ದನು. ಅವನ ಪಕ್ಕದಲ್ಲಿ ಸಮರ್ಥರಾದ ಮಂತ್ರಿಗಳೂ ಇದ್ದರು. ರಾವಣನು ಹನುಮಂತನನ್ನು ನೋಡಿದನು. "ನೀನಾರು? ಇಲ್ಲಿಗೇಕೆ ಬಂದೆ" ಎಂದು ಗದರಿಸಿದನು. "ನಾನೋ, ವಾನರರ ರಾಜನಾದ ಸುಗ್ರೀವನ ದೂತನು. ಆತನ ಆಜ್ಞೆಯಂತೆ ಬಂದೆ" ಎಂದು ಮಾರುತಿಯು ಸಮಾಧಾನದಿಂದ ಹೇಳಿದನು. ಅನಂತರ ರಾವಣನು ತನ್ನ ಮಂತ್ರಿಯಾದ ಪ್ರಹಸ್ತನನ್ನೇ ಮಾರುತಿಯೊಡನೆ ಮಾತನಾಡಲು ಹೇಳಿದನು. ಆದರಂತೆ ಪ್ರಹಸ್ತನು ಪ್ರಶ್ನೆಮಾಡಿದನು. ಆದರೆ ಹನುಮಂತನು ಅವನನ್ನು ಲೆಕ್ಕಿಸದೆ ರಾವಣನಿಗೇ ಉತ್ತರ ಕೊಟ್ಟನು.

"ಅಯ್ಯಾ! ರಾಕ್ಷಸರಾಜನೇ, ನಾನು ಸಹಜವಾಗಿಯೂ ವಾನರನೇ. ಯಾವ ವೇಷದಿಂದಲೂ ಬಂದಿಲ್ಲ. ನಿನಗೆ ಪರಿಚಿತನಾದ ವಾಲಿಯ ಸೋದರನಾದ ಸುಗ್ರೀವನು ನನ್ನನ್ನು ಇಲ್ಲಿಗೆ ಕಳುಹಿಸಿದನು. ಮಹಾಶಕ್ತಿಶಾಲಿಯಾದ ಆ ವಾಲಿಯನ್ನು ಶ್ರೀರಾಮನು ಒಂದೇ ಬಾಣದಿಂದ ಕೊಂದನು. ರಾಮನ ಸಹಾಯದಿಂದ ಸುಗ್ರೀವನು ಕಿಷ್ಕಿಂಧೆಯ ರಾಜನಾದನು. ಅನಂತರ ಸುಗ್ರೀವನು ತಾನು ರಾಮನಿಗಿತ್ತ ವಚನದಂತೆ ಸೀತೆಯನ್ನು ಹುಡುಕಲು ತನ್ನ ಕಪಿವೀರರನ್ನು ಕಳುಹಿಸಿದನು. ಹಾಗೆ ಕಳುಹಿಸಲ್ಪಟ್ಟು ದಕ್ಷಿಣ ದಿಕ್ಕಿಗೆ ಬಂದವರಲ್ಲಿ ನಾನೊಬ್ಬನು. ಲಂಕೆಯನ್ನು ಸೇರಿದ ನಾನು ನಿನ್ನ ಅರಮನೆಯನ್ನು ಹೊಕ್ಕು ಸೀತೆಯನ್ನು ಹುಡುಕಿದೆ. ಅಶೋಕವನದಲ್ಲಿ ನನಗೆ ಸೀತಾ

ಮಾತೆಯ ದರ್ಶನವಾಯಿತು. ಅವಳಿಂದ ಅಪ್ಪಣೆ ಪಡೆದು ಶ್ರೀರಾಮನ ಲ್ಲಿಗೆ ಹೊರಟ ನನಗೆ ನಿನ್ನನ್ನು ನೋಡುವ ಆಶೆಯಾಯಿತು. ಆದ್ದರಿಂದ ಅಶೋಕವನವನ್ನು ನಾಶಮಾಡಿದೆ. ಆತ್ಮರಕ್ಷಣೆಗಾಗಿ ನೀನು ಕಳುಹಿಸಿದ ರಾಕ್ಷಸರನ್ನು ಕೊಂದೆನು. ಈಗ ಬ್ರಹ್ಮಾಸ್ತ್ರದಿಂದ ಬಂಧಿತನಾಗಿ ಬಂದಿ ದ್ದೇನೆ. ಈಗ ನಾನು ನಿನಗೆ ನನ್ನ ರಾಜನು ಹೇಳಿದ ಸಂದೇಶವನ್ನು ತಿಳಿ ಸುತ್ತೇನೆ. ನೀನು ಕೂಡಲೇ ಸೀತೆಯನ್ನು ರಾಮನಿಗೊಪ್ಪಿಸಿ ಬದುಕಬೇ ಕೆಂಬುದೇ ಆ ಸಂದೇಶ. ನಿನ್ನನ್ನೂ ಈ ಲಂಕೆಯನ್ನೂ ನಾನೇ ನಾಶ ಮಾಡುತಿದ್ದೆ. ಆದರೆ ಸೀತೆಯನ್ನು ಕದ್ದವನನ್ನು ಶ್ರೀರಾಮನು ದಂಡಿಸ ಬೇಕು. ಅಲ್ಲದೆ ನನಗೆ ಹಾಗೆ ರಾಜಾಜ್ಞೆಯೂ ಇಲ್ಲ".

ಕೆನ್ನೆಗೆ ಹೊಡೆದಂತಹ ಈ ಮಾತುಗಳಿಂದ ರಾವಣನು ಕಿಡಿಕಾರ ತೊಡಗಿದನು. "ಈ ಕೋತಿಯನ್ನು ಕೊಂದುಬಿಡಿ" ಎಂದವನು ಭಯಂ ಕರವಾಗಿ ಹೇಳಿದನು. ಆಗ ಆ ಸಭೆಯಲ್ಲಿದ್ದ ಸಾತ್ವಿಕ ಸ್ವಭಾವದ ವಿಭೀಷ ಣನು, ದೂತನಾಗಿ ಬಂದವನನ್ನು ವಧಿಸಬಾರದಾಗಿ ಅಣ್ಣನನ್ನು ಕೇಳಿಕೊಂ ಡನು. ಕೊನೆಗೆ ರಾವಣನಿಗೂ ಅದು ಸರಿಯೆನಿಸಿತು. ಅವನು "ಈ ಕೋತಿಯ ಬಾಲಕ್ಕೆ ಬಟ್ಟೆಸುತ್ತಿ ಬೆಂಕಿಕೊಡಿ, ಊರಲ್ಲಿ ಮೆರವಣಿಗೆಮಾಡಿ" ಎಂದನು. ರಾವಣನ ಮಾತು ಕಿವಿಗೆ ಬೀಳುವುದರೊಳಗೇ ರಾಕ್ಷಸರು ಹನುಮಂತನ ಮೇಲೆ ಬಿದ್ದು ಬಾಲಕ್ಕೆ ಬಟ್ಟೆಸುತ್ತಿ, ಎಣ್ಣೆ ಸುರಿದು, ಬೆಂಕಿ ಕೊಟ್ಟರು. ಈ ಕೆಲಸದ ನುಗ್ಗಾಟಕಾಲದಲ್ಲೇ ಹನುಮಂತನು ಕೆಲವರನ್ನು ಬಡಿದು ಹಾಕಿದನು. ರಾಕ್ಷಸರು ಅವನನ್ನು ಊರಬೀದಿಯಲ್ಲಿ ಮೆರವಣಿಗೆ ಮಾಡುತಿದ್ದಾಗ ಆಂಜನೇಯನು ಲಂಕೆಯ ಕೋಟೆಕೊತ್ತಳಗಳನ್ನೂ ದಾರಿ ಕೇರಿಗಳನ್ನೂ ಅರಮನೆಯ ಆಯುಧಾಗಾರಗಳನ್ನೂ ಸರಿಯಾಗಿ ನೋಡು ತ್ತಲೆ ನಡೆದನು. ಅವನನ್ನು ನೋಡಿ ಒಬ್ಬೊಬ್ಬರು ಒಂದೊಂದು ಮಾತು ಹೇಳಿ ವಿನೋದಗೊಂಡರು. ಕೋತಿಯ ಬಾಲಕ್ಕೆ ಬೆಂಕಿಕೊಟ್ಟ ಸುದ್ದಿ ಯನ್ನು ರಾಕ್ಷಸಿಯೊಬ್ಬಳು ಸೀತೆಗೆ ತಿಳಿಸಿದಳು. ಆಗ ಸೀತೆ ಅಗ್ನಿಯನ್ನು ಧ್ಯಾನಿಸಿದಳು. ಮಾರುತಿಯ ಬಾಲವನ್ನು ಸುಡದಿರೆಂದು ಪ್ರಾರ್ಥಿಸಿದಳು. ಆ ಪ್ರಾರ್ಥನೆ ಸಫಲವಾಯಿತೋ ಎಂಬಂತೆ ಹನುಮಂತನಿಗೆ ಬಾಲದ ಉರಿ ಯಿಂದ ನೋವಾಗಲೇ ಇಲ್ಲ. ಹೀಗಾದುದು ಶ್ರೀರಾಮಚಂದ್ರನ ಮಹಿಮೆ

ಯಿಂದಲೇ ಎಂದು ಹನುಮಂತನು ನಂಬಿದನು. ಅದರಂತೆ ಶ್ರೀರಾಮನ ಜಯಘೋಷ ಸಾರುತ್ತ ಹಾರಿ ಪುರದ್ವಾರದ ಮೇಲೆ ಕುಳಿತನು. ಆ ದ್ವಾರದ ಅಗಳಿಯಿಂದ ಹಲವು ರಕ್ಕಸರನ್ನು ಕೊಂದನು.

ಪುರದ್ವಾರದ ಮೇಲೆ ನಿಂತು ಲಂಕಾನಗರಿಯನ್ನು ನೋಡುತ್ತಿದ್ದ ಮಾರುತಿಗೆ ಒಂದು ಯೋಚನೆ ಹೊಳೆಯಿತು. ಲಂಕೆಯನ್ನು ಅಗ್ನಿದೇವನಿಗೆ ಆಹುತಿಗೊಡುವುದೆಂಬುದೇ ಆ ಯೋಚನೆ. ಕೂಡಲೇ ಹನುಮಂತನು ಉರಿಯುವ ಬಾಲವನ್ನು ಹಿಡಿದುಕೊಂಡು ಮನೆಮನೆಗೆ ಬೆಂಕಿಕೊಟ್ಟನು. ರಾವಣನ ಮುಖ್ಯಮಂತ್ರಿಯ ಮನೆಗೆ ಮೊದಲು ಬೆಂಕಿಕೊಟ್ಟನು. ಅದು ಉರಿಯುತ್ತಿರುವಾಗಲೇ ಇತರ ಮಂತ್ರಿಗಳ ಮನೆಗಳಲ್ಲೂ ಜ್ವಾಲೆಗಳೆದ್ದುವು. ಒಂದು ಗಳಿಗೆಯೊಳಗೆ ರಾಕ್ಷಸರ ಮನೆಗಳು ಸುಟ್ಟುಬೂದಿಯಾದುವು. ಆದರೆ ಹನುಮಂತನು ವಿಭೀಷಣನ ಮನೆಯನ್ನು ಉಳಿಸಿದನು. ಸುಡುತ್ತಿರುವ ಲಂಕಾನಗರಿಯಲ್ಲಿ ರಾಕ್ಷಸರೆಲ್ಲ ದಿಕ್ಕುಗೆಟ್ಟು ಓಡಿದರು. ಎಷ್ಟೋ ಮಂದಿ ಅಗ್ನಿಗೆ ಆಹುತಿಯಾದರು. ಆಗ ಹನುಮಂತನಿಗೆ ಸೀತೆಯ ನೆನಪಾಯಿತು. ಆಕೆ ಏನಾದಳೋ ನೋಡಬೇಕೆಂದು ಅವನು ಮತ್ತೊಮ್ಮೆ ಅಶೋಕವನಕ್ಕೆ ಹಾರಿಹೋದನು. ಅಲ್ಲಿ ಸೀತಾದೇವಿಗೆ ಯಾವ ಅಪಾಯವೂ ಆಗಿರಲಿಲ್ಲ. ಅದನ್ನು ಕಂಡು ಅವನು ಸಂತೋಷಗೊಂಡನು. ಸೀತೆ ಅವನ ಸಾಮರ್ಥ್ಯವನ್ನು ಹೊಗಳಿ ಬೇಗನೇ ಶ್ರೀರಾಮನನ್ನು ಕರೆತಂದು ಶತ್ರುಗಳನ್ನು ನಾಶಪಡಿಸುವಂತೆ ಮಾಡೆಂದು ಹೇಳಿದಳು. ಅವಳ ಹರಕೆಯನ್ನು ಪಡೆದು ಮಾರುತಿಯು ಅಲ್ಲಿಂದ ಹೊರಟನು.

ಅಶೋಕವನದಿಂದ ಹೊರಟ ಹನುಮಂತನು ಲಂಕೆಯ ಅರಿಷ್ಟವೆಂಬ ಪರ್ವತವನ್ನೇರಿ ನಿಂತನು. ಸಮುದ್ರರಾಜನ ಸ್ತೋತ್ರಮಾಡಿದನು. ಮಹಾಕಾಯನಾಗಿ ನಿಂತ ಅವನು ಆ ಪರ್ವತದಿಂದ ಆಕಾಶಕ್ಕೆ ನೆಗೆದನು. ಆಕಾಶವೆಂಬ ಸಮುದ್ರದಲ್ಲಿ ದೋಣಿಯಂತೆ ಸಾಗಿದನು. ದೂರದಿಂದಲೇ ಅವನಿಗೆ ಮಹೇಂದ್ರಗಿರಿಯ ಶಿಖರವು ಕಾಣಿಸಿತು. ಆಗ ಅವನು ಇಮ್ಮಡಿ ಉತ್ಸಾಹದಿಂದ ವೇಗವಾಗಿ ಸಾಗಿದನು. ಅತ್ತ ಸುಗ್ರೀವನಿತ್ತ ಅವಧಿ ಮುಗಿಯಿತೆಂದು ಅಂಗದಾದಿಗಳು ಬೇಸರಗೊಂಡು ಹನುಮಂತನನ್ನೇ ಇದಿರುನೋಡುತ್ತಿದ್ದರು.

ಅವನು ಹಾರಿದ ದಿಕ್ಕನ್ನೇ ನೋಡುತ್ತಿದ್ದರು. ಅಷ್ಟರಲ್ಲಿ ಅವರಿಗೆ ಹನುಮಂತನ ಸಿಂಹನಾದ ಕೇಳಿತು. ಸ್ವಲ್ಪ ಹೊತ್ತಿನಲ್ಲೇ ಹನುಮಂತನು ಆಕಾಶದ ವಾಯುಮಂಡಲದಲ್ಲಿ ತೂರಿಬರುವುದು ಕಂಡಿತು. ವೀರಾಗ್ರಣಿ ಎಸೆದ ಬಾಣವು ಗುರಿಸೇರುವಂತೆ ಅವನು ಮಹೇಂದ್ರಗಿರಿಯ ಮೇಲೆ ನಿಂತನು. ವಾನರರು ಸಂತೋಷಗೊಂಡು ಕುಣಿಯುತ್ತ ಅವನನ್ನು ಹೊಗಳುತ್ತ ಹನುಮಂತನೆಡೆಗೆ ಓಡಿಓಡಿ ಬಂದರು. ಹನುಮಂತನೂ "ಸೀತೆಯನ್ನು ಕಂಡೆ! ಸೀತೆಯನ್ನು ಕಂಡೆ!" ಎಂದು ಘೋಷಣೆಮಾಡುತ್ತ ಅವರ ಬಳಿಗೆ ಓಡಿದನು. ಕಪಿನಾಯಕರೆಲ್ಲ ಅವನನ್ನು ಮುತ್ತಿದರು. ಮಾರುತಿ ಅಲ್ಲೇ ಕುಳಿತುಕೊಂಡು ತನ್ನ ಆಯಾಸವನ್ನು ಪರಿಹರಿಸಿಕೊಂಡನು. ಆ ಮೇಲೆ ಸೀತೆಯ ಸುದ್ದಿಯನ್ನು ಅಂಗದಾದಿಗಳಿಗೆ ಹೇಳಿದನು.

"ಲಂಕೆಯನ್ನು ಸೇರಿದೆ. ಸೀತೆಯನ್ನು ಹುಡುಕಿದೆ. ಲಂಕೇಶನ ವೈಭವವನ್ನೂ ನೋಡಿದೆ. ಅಶೋಕವನದಲ್ಲಿ ಶ್ರೀರಾಮಧ್ಯಾನದಲ್ಲಿರುವ ಸೀತೆಯನ್ನು ಕಂಡು ಮಾತನಾಡಿದೆ. ಸೀತೆಯಿಂದ ಬೀಳ್ಕೊಂಡವನೇ ಅಶೋಕವನವನ್ನು ಪುಡಿಪುಡಿಮಾಡಿದೆ. ಆಗ ನನ್ನನ್ನು ಬಂಧಿಸಲು ಬಂದ ರಾಕ್ಷಸರನ್ನು ಸದೆಬಡೆದೆ. ಕೊನೆಗೆ ಇಂದ್ರಜಿತುವಿನ ಬ್ರಹ್ಮಾಸ್ತ್ರವನ್ನು ಗೌರವಿಸಿ ಬಂಧಿತನಾದೆ. ರಾವಣನ ಸಭೆಗವರು ನನ್ನನ್ನು ಒಯ್ದರು. ರಾವಣನ ಸಭೆಯಲ್ಲಿ ಅವನಿಗೆ ಬುದ್ಧಿ ಹೇಳಿದೆ. ರಾವಣನು ನನ್ನ ಬಾಲಕ್ಕೆ ಬೆಂಕಿಕೊಡಿಸಿದನು. ನಾನು ಅವನ ಲಂಕೆಗೇ ಬೆಂಕಿಕೊಟ್ಟು ಬಂದೆ" ಎಂದು ಮಾರುತಿ ಹೇಳಿದ ಕಥೆಯನ್ನು ಕೇಳಿ ಕಪಿವೀರರು ಸಂತೋಷದಿಂದ ಕುಣಿದಾಡಿದರು. ಆ ಮೇಲೂ ಅವರು ಸೀತಾವಾರ್ತೆಯನ್ನು ಹೇಳೆಂದರು. ಹನುಮಂತನು ಮತ್ತೊಮ್ಮೆ ಸೀತೆಯನ್ನು ಕಂಡುದನ್ನೂ ಲಂಕೆಯ ವೈಭವವನ್ನೂ ವಿವರವಾಗಿ ತಿಳಿಸಿದನು.

ಹನುಮಂತನ ಮಾತುಕೇಳಿದ ಮೇಲೆ ಅವರೆಲ್ಲರೂ ಮುಂದೇನು ಮಾಡುವುದೆಂದು ಯೋಚಿಸಿದರು. ಲಂಕೆಯನ್ನು ನೋಡಿಬಂದ ಹನುಮಂತನು ಅವರೆಲ್ಲರೂ ಕೂಡಿ ರಾವಣನಿಗೆ ತಕ್ಕ ಪ್ರತೀಕಾರ ಮಾಡಬೇಕೆಂದನು. ಸೀತೆಯನ್ನು ಕರೆದುಕೊಂಡು ಹೋಗಿ ಶ್ರೀರಾಮಚಂದ್ರನ ಮುಂದೆ

ನಿಲ್ಲಿಸುವುದೇ ಒಳಿತೆಂದು ಅಂಗದನು ಹೇಳಿದನು. ಆಗ ಅವರೆಲ್ಲರಿಗೆ ಹಿರಿಯನಾದ ಜಾಂಬವನು, ಶ್ರೀರಾಮನಿಗೆ ಸೀತಾವೃತ್ತಾಂತವನ್ನು ತಿಳಿಸಿ, ಅವನ ಅಭಿಪ್ರಾಯದಂತೆ ನಡೆಯುವುದು ಯುಕ್ತವೆಂದನು. ಎಲ್ಲರೂ ಅವನ ಮಾತನ್ನೇ ಒಪ್ಪಿಕೊಂಡು ಕಿಷ್ಕಿಂಧೆಗೆ ಹಿಂತಿರುಗಿದರು. ಶ್ರೀರಾಮನನ್ನು ಕಾಣಬೇಕು; ಸೀತೆಯ ಸುದ್ದಿಯನ್ನು ಹೇಳಬೇಕು; ಸುಗ್ರೀವನಿಂದ ಹೊಗಳಿಸಿಕೊಳ್ಳಬೇಕು ಎಂಬ ಉತ್ಸಾಹದಲ್ಲಿದ್ದ ಆ ವಾನರರಿಗೆ ದಾರಿಯಲ್ಲಿ ಆಯಾಸವೇ ಆಗಲಿಲ್ಲ. ದಾರಿ ಸಾಗಿದುದು ತಿಳಿಯಲೇ ಇಲ್ಲ. ಕಿಷ್ಕಿಂಧೆಯ ಹೊರವಲಯದ ಮಧುವನವನ್ನು ಕಂಡೊಡನೆ ಅವರೆಲ್ಲರಿಗೂ ಉತ್ಸಾಹ ಹೆಚ್ಚಿತು. ಅವರು ವನಪ್ರವೇಶಿಸಿ ಮಧುವನ್ನು ಹೀರಿ ಸಂತೋಷಗೊಳ್ಳಬೇಕೆಂದು ಬಯಸಿದರು. ಆದಕ್ಕಾಗಿ ತಮ್ಮ ನಾಯಕನಾದ ಅಂಗದನ ಅಪ್ಪಣೆ ಬೇಡಿದರು. ಅಂಗದನು ಅದಕ್ಕೊಪ್ಪಿದನು. ಮಧುವನವೆಂದರೆ ಸುಗ್ರೀವನ ಮೆಚ್ಚಿನ ವನ. ಅದಕ್ಕಾಗಿಯೇ ಅದರ ರಕ್ಷಣೆಗೆ ತನ್ನ ಸೋದರ ಮಾವನಾದ ದಧಿಮುಖನನ್ನು ನೇಮಿಸಿದ್ದನು. ಮಧುವನವನ್ನು ಸೇರಿದ ಕಪಿಗಳು ಹೊಟ್ಟೆತುಂಬ ಜೇನು ಹೀರಿದರು. ಹೀರಿಹೀರಿ ಕುಣಿದು ಸಂತೋಷದ ಹಬ್ಬಮಾಡಿದರು. ಅನಂತರ ಮರಗಿಡಗಳನ್ನು ಮುರಿದು ನಾಶಮಾಡ ತೊಡಗಿದರು. ದಧಿಮುಖನು ಕೂಡಲೆ ಸುಗ್ರೀವನಲ್ಲಿಗೆ ಹೋಗಿ ಅಂಗದಾದಿಗಳು ಮಾಡಿದ ಅನಾಚಾರವನ್ನು ತಿಳಿಸಿದನು. ಅದನ್ನು ಕೇಳಿ ಸುಗ್ರೀವನು ಕೋಪಗೊಳ್ಳಲಿಲ್ಲ. ಕಾರಣ ಅವರು ಕೃತಕಾರ್ಯರಾಗಿ ಬಂದಿರಬೇಕೆಂದು ಊಹಿಸಿದನು. ಅದಕ್ಕಾಗಿ ಅವರನ್ನು ಕೂಡಲೇ ಬರಬೇಕೆಂದು ಆಜ್ಞಾಪಿಸಿದನು. ಸುಗ್ರೀವನ ಆಜ್ಞೆಯನ್ನು ಕೇಳಿದೊಡನೆ ಎಲ್ಲರೂ ತಮ್ಮ ಹುಚ್ಚಾಟವನ್ನು ಬಿಟ್ಟು ಅಂಗದನ ಹಿಂದಿನಿಂದ ಸುಗ್ರೀವನಿದ್ದಲ್ಲಿಗೆ ಹೋದರು.

ಬರುತ್ತಿರುವ ಕಪಿವೀರರ ಉತ್ಸಾಹವನ್ನು ನೋಡಿ ಅವರ ಬರವನ್ನೇ ಇದಿರುನೋಡುತ್ತ ನಿಂತಿದ್ದ ಸುಗ್ರೀವ ಶ್ರೀರಾಮಲಕ್ಷ್ಮಣರಿಗೆ ಸಂತೋಷವಾಯಿತು. ಕಪಿವೀರರು ಬಂದವರೇ ಅವರಿಗೆ ನಮಸ್ಕಾರಮಾಡಿ ನಿಂತರು. ಹನುಮಂತನು ಮುಂದೆ ಬಂದು, “ಶ್ರೀರಾಮಾ! ನಾನು ಲಂಕೆಗೆ ಹಾರಿ ಸೀತಾದೇವಿಯನ್ನು ಕಂಡುಬಂದೆ” ಎಂದು ಹೇಳಿದನು. ಸೀತೆ ಕೊಟ್ಟಿರುವ ಚೂಡಾಮಣಿಯನ್ನು ಶ್ರೀರಾಮನ ಕೈಗೆ ಕೊಟ್ಟನು. ರಾಮನು ಅದನ್ನು

ನೋಡಿ ನೋಡಿ ದುಃಖಿಸಿದನು. ಮತ್ತೆ ಮತ್ತೆ ಹನುಮಂತನಿಂದ ಸೀತಾ ವೃತ್ತಾಂತವನ್ನು ಕೇಳಿದನು. ಮಾರುತಿಯು ಮತ್ತೆ ಮತ್ತೆ ಸೀತೆಯ ಸುದ್ದಿಯನ್ನು ಹೇಳಿದನು. ಅವನು ಲಂಕೆಗೆ ಹಾರಿದ್ದು, ಲಂಕಾನಗರಿಯಲ್ಲಿ ಸುಳಿದುದು, ರಾವಣನ ಅಂತಃಪುರದ ಸೊಗಸನ್ನು ನೋಡಿದ್ದು, ಅಶೋಕವನದಲ್ಲಿ ಸೀತಾದೇವಿಯನ್ನು ಕಂಡದ್ದು, ಅವಳಿಗೆ ರಾಕ್ಷಸಿಯರು ಕೊಡುವ ಕಷ್ಟ, ಅವಳು ಪಡುತ್ತಿರುವ ಸಂಕಟ, ತಾನು ಅವಳೊಡನೆ ಆಡಿದ ಮಾತು, ಆಕೆ ಶ್ರೀರಾಮನಿಗಾಗಿ ಹೇಳಿದ ಕಥೆ, ಕಳುಹಿಸಿರುವ ಸಂದೇಶ– ಎಲ್ಲವನ್ನೂ ವಿಸ್ತಾರವಾಗಿ ಹೇಳಿದನು. ಕೊನೆಯಲ್ಲಿ "ಶ್ರೀರಾಮಾ! ನಿನ್ನ ಧ್ಯಾನದಲ್ಲಿರುವ ಸೀತಾದೇವಿ ನಿನಗಾಗಿ ಪರಿತಪಿಸುತಿದ್ದಾಳೆಂದೂ ಆಕೆಯನ್ನು ಶ್ರೀರಾಮ ಲಕ್ಷ್ಮಣರು ಬಂದು ಬಿಡಿಸಬೇಕೆಂದೂ ದೇವಿ ಪ್ರಾರ್ಥಿಸಿದಳು" ಎಂದು ಹೇಳಿದನು.

ಮಾರುತಿಯ ಮಾತುಗಳನ್ನು ಸವಿಸ್ತಾರವಾಗಿ ಕೇಳಿದ ಮೇಲೆ ಶ್ರೀರಾಮನ ಮನಸ್ಸು ಸ್ವಲ್ಪ ಸಮಾಧಾನಗೊಂಡಿತು.

## ೬. ಯುದ್ಧಕಾಂಡ.

ಶ್ರೀರಾಮಚಂದ್ರನು ಸೀತಾವೃತ್ತಾಂತವನ್ನು ಹನುಮಂತನಿಂದ ಕೇಳಿ ಸಂತೋಷಗೊಂಡನು. ತನಗೆ ಅತ್ಯಂತ ಪ್ರಿಯಳಾದ ಸೀತೆಯ ಸುದ್ದಿಯನ್ನು ತಂದ ಹನುಮಂತನಿಗೆ ತಾನು ಯಾವ ಉಡುಗೊರೆಯನ್ನೀಯಲೆಂದು ಯೋಚಿಸಿದನು. ಆ ಮೇಲೆ ಸುಗ್ರೀವಾದಿಗಳನ್ನು ನೋಡಿ ಹನುಮಂತನನ್ನು ಶ್ಲಾಘಿಸಿದನು. "ಈ ಆಲಿಂಗನವೇ ನಾನು ಇವನಿಗೆ ಕೊಡುವ ಬಹುಮಾನ ಸರ್ವಸ್ವವು" ಎಂದು ಹೇಳಿದವನೇ ಮಾರುತಿಯನ್ನು ಅಪ್ಪಿಕೊಂಡನು. ಆ ಮೇಲೆ ಶ್ರೀರಾಮನು ಸ್ವಲ್ಪಹೊತ್ತು ಮೌನವಾಗಿದ್ದನು. ಆಗ ಅವನಿಗೆ ಸೀತೆಯಿರುವಲ್ಲಿಗೆ ಹೋಗುವುದು ಹೇಗೆಂಬುದೇ ತೋಚದಾಯ್ತು. ಇದಕ್ಕೇನು ಉಪಾಯವೆಂದು ಶ್ರೀರಾಮನು ಸುಗ್ರೀವಾದಿಗಳನ್ನೇ ಕೇಳಿದನು. ಆಗ ಸುಗ್ರೀವನು ಧೈರ್ಯದ ಮಾತುಗಳನ್ನಾಡಿದನು. ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ ಹೋಗಬೇಕೆಂದನು. ಸೇತುವೆಕಟ್ಟುವ ಉಪಾಯವನ್ನು

ಶ್ರೀರಾಮನೇ ಯೋಚಿಸಬೇಕೆಂದು ಸೂಚಿಸಿದನು. ಸೇತುವೆಕಟ್ಟುವ ಕೆಲಸವನ್ನು ವಾನರರು ಮಾಡುವರೆಂದೂ ಆದಾದ ಮೇಲೆ ರಾವಣನ ವಧೆಯಾಗಿ ಸೀತೆಯನ್ನು ಪಡೆದಂತೆಯೇ ಎಂದೂ ಹೇಳಿದನು. ಈ ಮಾತುಗಳಿಂದ ರಾಮನು ಸಮಾಧಾನಗೊಂಡನು. ಸಮುದ್ರಕ್ಕೆ ಸೇತುವೆಕಟ್ಟುವ ಸಾಮರ್ಥ್ಯ ತನಗಿದೆಯೆಂದು ನಂಬಿಕೆಯುಳ್ಳ ಶ್ರೀರಾಮನು ಹನುಮಂತನೊಡನೆ ರಾವಣನ ಬಲಾಬಲಗಳ ಕುರಿತು ವಿಚಾರಿಸಿದನು. ಹನುಮಂತನು ತಾನು ತಿಳಿದುದನ್ನು ತಿಳಿಸಿದನು. "ರಾವಣನಲ್ಲಿ ಆನೆ ಕುದುರೆ ರಥಗಳ ಮಹಾಸೇನೆಯಿದೆ. ನಗರದ ದ್ವಾರಗಳನ್ನು ಶೂರರಾದ ರಾಕ್ಷಸರು ರಕ್ಷಿಸುತಿದ್ದಾರೆ. ನಗರದ ಸುತ್ತಲೂ ದೊಡ್ಡದಾದ ಪ್ರಾಕಾರವೂ ಆಳವಾದ ಕಂದಕವೂ ಇದೆ. ತ್ರಿಕೂಟಾಚಲದ ಮೇಲಿರುವ ಲಂಕೆಯನ್ನು ಪ್ರವೇಶಿಸುವುದೂ ಸುಲಭವಲ್ಲ. ಆದರಲ್ಲೂ ರಾವಣನು ಯುದ್ಧಾಸಕ್ತಿಯುಳ್ಳವನು. ಆದರೂ ಕಡಲನ್ನು ದಾಟಿದರೆ ರಾವಣನು ಈ ವಾನರವೀರರಿಂದ ಹತನಾಪನೆಂದೇ ತಿಳಿ" ಎಂದು ಹೇಳಿ ಜೈತ್ರಯಾತ್ರೆಗೆ ಅಪ್ಪಣೆ ಬೇಡಿದನು.

ಆಗ ಸೂರ್ಯನು ಆಕಾಶಮಧ್ಯದಲ್ಲಿದ್ದನು. ಜೈತ್ರಯಾತ್ರೆಗೆ ಹೊರಡಲು ಅದೇ ಶುಭಮುಹೂರ್ತವೆಂದು ರಾಮನು ಸುಗ್ರೀವನಿಗೆ ತಿಳಿಸಿದನು. ಕೂಡಲೇ ನೀಲನೆಂಬ ಸೇನಾಪತಿಯೊಂದಿಗೆ ಲಕ್ಷಮಂದಿ ವಾನರರು ಮಾರ್ಗಶೋಧನೆಗಾಗಿ ಹೊರಟರು. ಅನಂತರ ರಾಮಲಕ್ಷ್ಮಣರು ಸುಗ್ರೀವನ ಮಹಾಸೇನೆಯೊಂದಿಗೆ ಹೊರಟರು. ವಿಜಯಯಾತ್ರೆಗೆ ಹೊರಟ ವಾನರರಲ್ಲಿ ಉತ್ಸಾಹ ಉಕ್ಕಿಹರಿಯಿತು. ಅವರು ವೀರವಾಕ್ಯಗಳನ್ನಾಡುತ್ತ, ಹಾರುತ್ತ, ಕುಣಿಯುತ್ತ ಮುಂದೆ ಸಾಗಿದರು. ನೀಲನು ಸೇನಾಪ್ರಯಾಣಕ್ಕೆ ಯೋಗ್ಯ ಮಾರ್ಗವನ್ನು ರಚಿಸುತ್ತ ಮುನ್ನಡೆದನು. ಹತ್ತುಕೋಟಿ ವಾನರರಿಂದ ಕೂಡಿದ ಶತಬಲಿಯು ವಾನರಸೇನೆಯ ರಕ್ಷಕನಾಗಿದ್ದನು. ಶ್ರೀರಾಮಲಕ್ಷ್ಮಣರು ಹನುಮಂತ ಅಂಗದರ ಹೆಗಲನ್ನೇರಿ ಸೂರ್ಯಚಂದ್ರರಂತೆ ಹೊಳೆಯುತ್ತ ಆ ಸೇನೆಯೊಂದಿಗೆ ನಡೆದರು. ಈ ರೀತಿಯಲ್ಲಿ ಆ ಸೇನೆಯು ಮುಂದೆ ಹೋಗಿ ಮಹೇಂದ್ರಗಿರಿಯನ್ನು ಸೇರಿತು. ಶ್ರೀರಾಮನು ಪರ್ವತಶಿಖರವನ್ನೇರಿ ಮಹಾಸಾಗರವನ್ನು ನೋಡಿದನು. ಅನಂತರ ಅವನ ಅಪ್ಪಣೆಯಂತೆ ವಾನರಸೇನೆಯು ಸಮುದ್ರದ ದಂಡೆಯಲ್ಲೇ ಬೀಡುಬಿಟ್ಟಿತು.

ಅತ್ತ ಲಂಕೆಯಲ್ಲಿ ಹನುಮಂತನು ಮಾಡಿದ ಅನಾಹುತಗಳನ್ನು ಕಂಡು ರಾವಣನು ಯೋಚನಾಪರನಾದನು. ಅವನು ಕೂಡಲೇ ತನ್ನ ಮಂತ್ರಿಗಳನ್ನೂ ರಾಕ್ಷಸ ವೀರರನ್ನೂ ಕರೆದು ಆ ಕುರಿತು ವಿಚಾರಿಸಿದನು. ಲಂಕೆಯನ್ನು ಮುತ್ತಲು ಬರುವ ರಾಮನ ವಿಚಾರವಾಗಿ ಯಾವ ಕೆಲಸ ಮಾಡಬೇಕೆಂದು ಕೇಳಿದನು. ಆಗ ಅಲ್ಲಿ ನೆರೆದಿದ್ದ ರಾಕ್ಷಸರೆಲ್ಲರೂ ರಾವಣನನ್ನು ಹೊಗಳಿ ರಾಮನನ್ನು ಸಂಹರಿಸಲು ಯಾವ ಯೋಚನೆಯೂ ಬೇಡವೆಂದರು. ಇಂದ್ರಜಿತುವೊಬ್ಬನೇ ಸಾಕೆಂದರು. ರಾವಣನ ಮಂತ್ರಿಗಳೂ ರಾಕ್ಷಸ ಪ್ರಮುಖರೂ ಆದ ಪ್ರಹಸ್ತ, ದುರ್ಮುಖ, ವಜ್ರದಂಷ್ಟ್ರ- ಮುಂತಾದವರೂ ಈ ಮಾತನ್ನೇ ಸಮರ್ಥಿಸಿದರು. ಆದರೆ ರಾವಣನ ತಮ್ಮನಾದ ವಿಭೀಷಣನು ಮಾತ್ರ ಈ ರಾಕ್ಷಸರ ಮಾತಿಗೆ ವಿರೋಧವಾದ ಸೂಚನೆಯನ್ನಿತ್ತನು. "ಅಣ್ಣಾ! ಶ್ರೀರಾಮನೊಡನೆ ಯುದ್ಧವು ಒಳಿತಲ್ಲ. ಸೀತೆಯನ್ನು ನೀನು ಕದ್ದುತಂದಿರುವುದು ನ್ಯಾಯವಲ್ಲ. ಆಕೆಯನ್ನು ರಾಮನಿಗೊಪ್ಪಿಸು" ಎಂದು ಹೇಳಿದನು. ದುಷ್ಟನಾದ ರಾವಣನಿಗೆ ಸಾತ್ವಿಕನಾದ ವಿಭೀಷಣನ ನೀತಿವಚನ ಸರಿಯೆನಿಸಲಿಲ್ಲ. ಅವನು ಸಭೆಯನ್ನು ವಿಸರ್ಜನೆಮಾಡಿ ಅಂತಃಪುರವನ್ನು ಸೇರಿದನು. ಇವನ್ನು ಕಂಡು ವಿಭೀಷಣನ ಮನಸ್ಸಿಗೆ ನೋವಾಯಿತು. ಅವನು ಮರುದಿನ ಪ್ರಾತಃಕಾಲದಲ್ಲಿ ರಾವಣನ ಅಂತಃಪುರಕ್ಕೆ ನಡೆದನು. ಆಗ ರಾವಣನು ವೇದವಿದರಾದ ಬ್ರಾಹ್ಮಣರ ಮುಂದೆ ಕುಳಿತಿದ್ದನು. ಅವರು ಅವನ ವಿಜಯಕ್ಕಾಗಿ ಮಂತ್ರಗಳನ್ನು ಪಠಿಸುತ್ತಿದ್ದರು. ಬುದ್ಧಿವಂತರಾದ ಮಂತ್ರಿಗಳೂ ಬಳಿಯಲ್ಲೇ ಕುಳಿತಿದ್ದರು. ವಿಭೀಷಣನು ಬಂದವನೇ ಅಣ್ಣನಿಗೆ ನಮಸ್ಕರಿಸಿದನು. ಸೀತೆಯನ್ನು ರಾವಣನು ಕದ್ದುತಂದ ಬಳಿಕ ಲಂಕೆಯಲ್ಲಾಗುವ ಅಪಶಕುನಗಳನ್ನು ನಿವೇದಿಸಿದನು. ಪರಸ್ತ್ರೀಯರನ್ನು ಅಪಹರಿಸಿತಂದುದು ಅನ್ಯಾಯವೆಂದೂ ಅದಕ್ಕೆ ಪ್ರಾಯಶ್ಚಿತ್ತವಾಗಿ ಅವಳನ್ನು ಮರಳಿ ರಾಮನಿಗೊಪ್ಪಿಸಬೇಕೆಂದೂ ಕೇಳಿಕೊಂಡನು. ಲಂಕೆಯ ರಾಕ್ಷಸಕುಲದ ರಕ್ಷಣೆಗಾಗಿ ತಾನೀ ಮಾತನ್ನು ಹೇಳುತ್ತಿರುವೆನೆಂದು ಬಿನ್ನವಿಸಿದನು. ಆದರೆ ರಾವಣನಿಗೆ ಅವನ ಮಾತು ರುಚಿಸಲಿಲ್ಲ. ತನಗೆ ಯಾರ ಭಯವೂ ಇಲ್ಲವೆಂದು ಅವನು ಅಬ್ಬರದ ಮಾತುಗಳನ್ನಾಡಿದನು. ವಿಭೀಷಣನನ್ನು ಕಳುಹಿಸಿ ಅವನು ಸಭಾಭವನಕ್ಕೆ ಹೊರಟನು.

ಸುವರ್ಣಖಚಿತವಾದ ರಥವನ್ನೇರಿ ರಾವಣನು ಸಭಾಮಂದಿರಕ್ಕೆ ಬಂದನು. ಅಂದಿನ ಸಭೆಗೆ ರಾವಣನ ಅಪ್ಪಣೆಯಂತೆ ಪ್ರಮುಖರಾದ ಪೌರರೂ ಅಮಾತ್ಯರೂ ಬಂದಿದ್ದರು. ವಿಭೀಷಣ, ಕುಂಭಕರ್ಣ, ಇಂದ್ರಜಿತು ಮುಂತಾದ ಬಂಧುಗಳೂ ಸಭೆಯಲ್ಲಿ ನೆರೆದಿದ್ದರು. ವೈಭವದ ಮೆರವಣಿಗೆಯಲ್ಲಿ ಬಂದ ರಾವಣನು ಉಚಿತಾಸನವನ್ನೇರಿ ಕುಳಿತನು. ನಿಶ್ಶಬ್ದವಾಗಿ ಗಂಭೀರವಾಗಿದ್ದ ಆ ಸಭೆಯನ್ನು ನೋಡಿ ರಾವಣನು ಅವರೊಡನೆ ಮಾತನಾಡಿದನು. ಆ ವರೆಗೆ ನಿದ್ರೆಯಲ್ಲೇ ಇದ್ದು ಅಂದು ಮಾತ್ರ ಸಭೆಗೆ ಬಂದಿದ್ದ ಕುಂಭಕರ್ಣನಿಗಾಗಿ ರಾವಣನು ಸೀತೆಯನ್ನು ತಂದ ವೃತ್ತಾಂತವನ್ನೂ ಹೇಳಿದನು. "ಪುಂಜಿಕಸ್ಥಲೆಯೆಂಬ ಅಪ್ಸರೆಯಿಂದಾಗಿ ನನಗೊದಗಿದ ಬ್ರಹ್ಮಶಾಪದ ದೆಸೆಯಿಂದಾಗಿ ನಾನು ಸೀತೆಯನ್ನು ಬಲಾತ್ಕರಿಸಲಾರದಾಗಿರುವೆನು. ಹಾಗೆ ಮಾಡಿದರೆ ನನ್ನ ತಲೆಯು ನೂರು ಹೋಳಾಗುವುದೆಂದು ಬ್ರಹ್ಮಶಾಪವಿದೆ. ಆದ್ದರಿಂದ ಸೀತೆಯನ್ನು ರಾಮನಿಗೆ ಒಪ್ಪಿಸಬೇಕೇ? ರಾಮನೊಡನೆ ಯುದ್ಧಮಾಡಬೇಕೇ?" ಎಂದು ಕೇಳಿದನು.

ಕಾಮದಿಂದ ಕುರುಡನಾದ ಅಣ್ಣನ ಮಾತುಕೇಳಿ ಕುಂಭಕರ್ಣನಿಗೂ ಕೋಪ ಬಂತು. "ಅಣ್ಣ! ಅವಿಚಾರದಿಂದ ಸೀತಾಪಹರಣ ಮಾಡಿದೆ. ಅದರಿಂದಾಗಿ ನಿನಗಿಂದು ಈ ಸಂಕಟ ಬಂದಿದೆ. ಅಂದೇ ರಾಮನು ನಿನ್ನನ್ನು ಕೊಲ್ಲದಿರುವುದು ನಿನ್ನ ಭಾಗ್ಯವೆಂದೇ ಹೇಳಬೇಕು. ಆದರೂ ನಿನ್ನ ಶತ್ರುವಾದ ರಾಮನನ್ನು ಕೊಂದು ಅವನ ರಕ್ತವನ್ನು ಹೀರುತ್ತೇನೆ. ಆ ಮೇಲೆ ನೀನು ಸೀತೆಯನ್ನು ಸ್ವಾಧೀನಪಡಿಸಿಕೊಳ್ಳು" ಎಂದನು. ಆಗಲೂ ವಿಭೀಷಣನು ರಾವಣನಿಗೆ ಹಿತವಚನಗಳನ್ನೇ ಹೇಳಿದನು. ರಾಮನನ್ನು ಜಯಿಸುವ ವೀರರು ಲಂಕೆಯಲ್ಲಿಲ್ಲವೆಂದು ಸಾರಿದನು. ಆಗ ಇಂದ್ರಜಿತುವು ಕೋಪದಿಂದ ಕಿಡಿಕಿಡಿಯಾದನು. ಪೌಲಸ್ತ್ಯವಂಶದಲ್ಲಿ ಹುಟ್ಟಿದವನು ಮಾನವನನ್ನು ಹೊಗಳುವುದು ಹೀನವೆಂದನು. ಇಂದ್ರನನ್ನು ಸೋಲಿಸಿದ ತಾನೊಬ್ಬನೇ ರಾಮನನ್ನು ಕೊಲ್ಲುವೆನೆಂದನು. ಇಂದ್ರಜಿತುವಿನ ಮಾತು ಕೇಳಿದ ವಿಭೀಷಣನು ಅವನಿಗೆ ಶ್ರೀರಾಮನ ವಿಚಾರವನ್ನು ಸರಿಯಾಗಿ ತಿಳಿಸಿದನು. ವಿವೇಕವಿಲ್ಲದ ಅಪಂಡಿತನಾದ ಇಂದ್ರಜಿತುವು ರಾಜಕಾರ್ಯದಂತಹ ಘನವಾದ ವಿಚಾರದಲ್ಲಿ ಮಾತನಾಡಬಾರದೆಂದು ಎಚ್ಚರಿಸಿದನು. ಸೀತೆಯನ್ನು ರಾಮನಿ

ಗೊಪ್ಪಿಸಿ ಲಂಕೆಯನ್ನು ನಾಶದ ಕೂಪದಿಂದ ರಕ್ಷಿಸಬೇಕೆಂದು ಮತ್ತೊಮ್ಮೆ ರಾವಣನನ್ನು ಬೇಡಿಕೊಂಡನು. ಆದರೆ ಅದು ರಾವಣನಿಗೆ ಉಚಿತವೆಂದು ತೋರಲಿಲ್ಲ. ಆವನು ಕೋಪದಿಂದ ಕಿಡಿಕಾರುತ್ತ ವಿಭೀಷಣನನ್ನು ಹಿತಶತ್ರು ವೆಂದು ಛಂಗಿಸಿ ಮಾತನಾಡಿದನು. "ನೀಚಾ! ನನ್ನ ಏಳಿಗೆಯನ್ನು ನೋಡಿ ಮತ್ಸರಗೊಂಡಿರುವ ನೀನು ನುಡಿದಂತೆ ಬೇರೆಯವನು ನುಡಿದಿದ್ದರೆ ಅವನ ತಲೆಯು ಇಷ್ಟು ಹೊತ್ತಿಗೆ ನೆಲದಲ್ಲಿರುತಿತ್ತು. ಕುಲಗೇಡಿ, ನನ್ನೆದುರು ನಿಲ್ಲ ಬೇಡ" ಎಂದು ಘರ್ಜಿಸಿದನು. ಇದನ್ನು ಕೇಳಿ ನ್ಯಾಯವಾದಿಯಾದ ವಿಭೀ ಷಣನು ತನ್ನ ನಾಲ್ವರು ಮಂತ್ರಿಗಳೊಂದಿಗೆ ಸಭೆಯಿಂದ ಹೊರಟನು. ಆ ಮೊದಲು ರಾವಣನಿಗೆ ತನ್ನ ಕೊನೆಮಾತನ್ನು ಹೇಳಿದನು. "ವಿಧಿಯಿಂದ ಪ್ರೇರಿತನಾದ ನಿನಗೆ ನನ್ನ ಹಿತವಚನ ಪ್ರಿಯವಾಗಲಿಲ್ಲ. ಹಿರಿಯಣ್ಣನಾದ ನೀನು ನನಗೆ ತಂದೆಗೆ ಸಮಾನನು. ಹಾಗೆಂದು ನಿನಗೆ ಮಂಗಲವಾಗಲೆಂದೇ ಹಿತವಚನ ಹೇಳಿದೆ. ನಿನಗೆ ಮಂಗಲವಾಗಲಿ. ಶ್ರೀರಾಮನಿಂದ ಲಂಕೆಯನ್ನೂ ನಿನ್ನನ್ನೂ ರಕ್ಷಿಸಿಕೋ" ಎಂದು ಹೇಳಿ ಆಕಾಶಕ್ಕೆ ನೆಗೆದು ರಾಮನಿದ್ದಲ್ಲಿಗೆ ಬಂದನು.

ಶ್ರೀರಾಮನೆಡೆಗೆ ಬರುತಿದ್ದ ವಿಭೀಷಣನನ್ನೂ ಅವನ ಮಂತ್ರಿಗಳನ್ನೂ ವಾನರವೀರರು ದೂರದಿಂದಲೇ ನೋಡಿ ಶ್ರೀರಾಮನಿಗಿದನ್ನು ತೋರಿಸಿದರು. ಆ ದುಷ್ಟರನ್ನು ವಧಿಸಬೇಕೆಂದೇ ಸುಗ್ರೀವಾದಿಗಳು ಸೂಚಿಸಿದರು. ಅಷ್ಟರಲ್ಲಿ ವಿಭೀಷಣನು ತಾನು ಶ್ರೀರಾಮನಿಗೆ ಶರಣಾಗತನಾಗಲು ಬಂದಿರುವೆನೆಂದು ಹೇಳುತ್ತ ನೆಲಕ್ಕಿಳಿದು ಬಂದನು. ಬಂದವನು ವಿಭೀಷಣನೆಂದು ತಿಳಿದೊಡನೆ ಹನುಮಂತನು ಶ್ರೀರಾಮನಿಗೆ ಅವನು ವಿವೇಕಿಯೆಂದೂ ಸಾತ್ವಿಕ ಸ್ವಭಾವ ದವನೆಂದೂ ತನ್ನ ಹಿಂದಿನ ಅನುಭವವನ್ನು ತಿಳಿಸಿ ಆವನನ್ನು ಪೊರೆಯಬೇ ಕೆಂದನು. ಆಗ ಶ್ರೀರಾಮನು ಸುಗ್ರೀವನನ್ನು ಸಮಾಧಾನಪಡಿಸಿ ಶರಣಾಗತ ನಾಗಿ ಬಂದ ವಿಭೀಷಣನನ್ನು ಬಳಿಗೆ ಕರೆದು ಅವನಿಗೆ ಅಭಯವಿತ್ತನು. ವಿಭೀಷಣನು ಶ್ರೀರಾಮನಿಗೆ ನಮಸ್ಕರಿಸಿದನು. ರಾವಣನ ತಮ್ಮನಾದ ತಾನು ಸ್ನೇಹಿತರನ್ನೂ ಬಂಧುಬಾಂಧವರನ್ನೂ ತೊರೆದು ಬಂದಿರುವೆನೆಂದೂ ರಾಕ್ಷಸರ ವಧೆಯಲ್ಲಿ ತಾನು ರಾಮನಿಗೆ ಸಹಾಯಕನಾಗುವೆನೆಂದೂ ತಿಳಿಸಿ ದನು. ಕೂಡಲೇ ರಾಮನು ವಾನರರೆದುರಿಗೆ ವಿಭೀಷಣನಿಗೆ ಲಂಕಾರಾಜ್ಯದ

ಪಟ್ಟಾಭಿಷೇಕಮಾಡಿಸಿ ಅವನನ್ನು ಲಂಕೆಯ ರಾಜನೆಂದು ಸಾರಿದನು. ಶರಣಾಗತರನ್ನು ನಂಬಿ ರಕ್ಷಿಸುವ ಶ್ರೀರಾಮನ ಗುಣಗಳನ್ನು ನೋಡಿ ವಾನರರು ಅವನನ್ನು ಕೊಂಡಾಡಿದರು.

ಅನಂತರ ಶ್ರೀರಾಮನು ಮೂರು ದಿನಗಳ ವರೆಗೆ ವರುಣನ ತಪಸ್ಸು ಮಾಡಿದನು. ಆದರೆ ವರುಣನು ಒಲಿದು ಬರಲಿಲ್ಲ. ಇದನ್ನು ಕಂಡು ಶ್ರೀರಾಮನು ಸಮುದ್ರವನ್ನು ಶೋಷಿಸಿ ದಾರಿಮಾಡುವೆನೆಂದು ನಿಶ್ಚೈಸಿದನು. ಅದರಂತೆ ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸಿ, ಬಿಲ್ಲಿಗದನ್ನು ಜೋಡಿಸಿದನು. ಶ್ರೀರಾಮನು ಬ್ರಹ್ಮಾಸ್ತ್ರವನ್ನು ಹೆದೆಗೇರಿಸಿದಾಗಲೇ ವರುಣನು ಸಾಗರಮಧ್ಯದಲ್ಲಿ ಕಾಣಿಸಿಕೊಂಡನು. ಸುಂದರನಾಗಿ ಹೊಳೆಯುತ್ತಿರುವ ಕಾಂತಿಯುಳ್ಳ ವರುಣನು ಶ್ರೀರಾಮನನ್ನು ಪ್ರಸನ್ನನಾಗೆಂದು ಬೇಡಿಕೊಂಡನು. ವಿಶ್ವಕರ್ಮನ ಮಗನಾದ ನಳನು ಸಮುದ್ರಕ್ಕೆ ಸೇತುವೆಯನ್ನು ಕಟ್ಟಬೇಕೆಂದೂ ಶ್ರೀರಾಮನು ಹೆದೆಗೇರಿಸಿದ ಅಸ್ತ್ರವನ್ನು ದ್ರುಮಕುಲ್ಯ ಪ್ರದೇಶದ ದಸ್ಯುಗಳ ಮೇಲೆ ಪ್ರಯೋಗಿಸಬೇಕೆಂದೂ ತಿಳಿಸಿ ಅಂತರ್ಧಾನನಾದನು. ಶ್ರೀರಾಮನು ವರುಣನ ಮಾತಿನಂತೆ ತನ್ನ ಅಸ್ತ್ರವನ್ನು ದ್ರುಮಕುಲ್ಯ ಪ್ರದೇಶದ ದಸ್ಯುಗಳ ಮೇಲೆ ಪ್ರಯೋಗಿಸಿ ವಾನರರಿಗೆ ಸೇತು ಕಟ್ಟಲು ಆಜ್ಞೆಮಾಡಿದನು. ಕೂಡಲೇ ವಾನರರು ಕಲ್ಲುಮರಗಳನ್ನೂ ಗುಡ್ಡಬೆಟ್ಟಗಳನ್ನೂ ಹೊತ್ತುತಂದು ಸಮುದ್ರಕ್ಕೆ ಸೇತುವೆ ರಚಿಸಿದರು. ಆ ಅದ್ಭುತವಾದ ಸೇತುವೆಯನ್ನು ಕಂಡು ಎಲ್ಲರೂ ಆಶ್ಚರ್ಯಪಟ್ಟರು. ಆ ಸೇತುವೆಯ ಬಳಿಯಲ್ಲಿ ವಿಭೀಷಣನು ತನ್ನ ಮಂತ್ರಿಗಳೊಂದಿಗೆ ಬಂದು ನಿಂತನು. ಶ್ರೀರಾಮನು ಲಕ್ಷ್ಮಣನೊಡನೆ ವಾನರಸೇನೆಯ ಮುಂಭಾಗದಲ್ಲಿ ನಡೆದನು. ಈ ರೀತಿಯಲ್ಲಿ ವಾನರಸೇನೆಯು ಸೇತುವೆಯನ್ನು ದಾಟಿತು. ಸೇತುವೆಯನ್ನು ದಾಟುವ ಕಪಿಗಳ ಉತ್ಸಾಹವು ಅಷ್ಟಿಷ್ಟಲ್ಲ! ಅವರು ಮಾಡಿದ ಜಯಘೋಷವು ಸಮುದ್ರಘೋಷವನ್ನೇ ಅಡಗಿಸಿತು. ಶ್ರೀರಾಮನ ವಾನರಸೇನೆಯು ಲಂಕಾನಗರದ ಪ್ರಾಕಾರದ ಬಳಿಯಲ್ಲೇ ಬೀಡುಬಿಟ್ಟಿತು. ಶ್ರೀರಾಮನು ಕೂಡಲೇ ಕಪಿನಾಯಕರನ್ನು ಕರೆದು ತಮ್ಮ ತಮ್ಮ ಸೇನೆಗಳನ್ನು ವ್ಯೂಹದಲ್ಲಿ ನಿಲ್ಲಿಸುವಂತೆ ಅಪ್ಪಣೆಮಾಡಿದನು. ಶ್ರೀರಾಮನ ಅಪ್ಪಣೆಯಂತೆ ವಾನರಸೇನೆಯು ಗರುಡವ್ಯೂಹವಾಗಿ ನಿಂತಿತು. ಅಂಗದನು ತನ್ನ ಸೇನೆಯೊಂದಿಗೆ ನೀಲನನ್ನು ಕೂಡಿಕೊಂಡು ವ್ಯೂಹದ ಮಧ್ಯಭಾಗದಲ್ಲಿ

ನಿಂತನು. ಋಷಭನು ಬಲಭಾಗದಲ್ಲೂ ಗಂಧಮಾಗದನು ಎಡಭಾಗದಲ್ಲೂ ನಿಂತನು. ಶ್ರೀರಾಮನು ಲಕ್ಷ್ಮಣನೊಂದಿಗೆ ವ್ಯೂಹದ ಅಗ್ರಭಾಗದಲ್ಲೇ ಇದ್ದನು. ಹೀಗೆ ವ್ಯೂಹರಚನೆಯಾದ ಮೇಲೆ ವಾನರಸೇನೆಯು ಲಂಕಾನಗರಿಯನ್ನು ಮುತ್ತಲು ಶ್ರೀರಾಮನ ಆಜ್ಞೆಯನ್ನು ನಿರೀಕ್ಷಿಸುತಿತ್ತು.

ಶ್ರೀರಾಮನು ಸಮುದ್ರವನ್ನು ದಾಟಿದನೆಂಬ ವಾರ್ತೆಯನ್ನು ಕೇಳಿದ ರಾವಣನು ತನ್ನ ಮಂತ್ರಿಗಳಾದ ಶುಕಸಾರಣರನ್ನು ಕರೆದು ರಾಮನ ಸೇನಾ ಬಲವನ್ನು ತಿಳಿದು ಬರಲು ಕಳುಹಿಸಿದನು. ಅವರು ವಾನರರ ರೂಪವನ್ನು ಧರಿಸಿ ರಾಮಸೇನೆಯಿರುವಲ್ಲಿಗೆ ಬಂದರು. ಬೆಟ್ಟದ ತುದಿಯಲ್ಲಿ, ಸಮುದ್ರದ ತೀರದಲ್ಲಿ, ವನಗಳ ಎಡೆಯಲ್ಲಿ ಹರಡಿರುವ ಸೇನೆಯನ್ನೂ ಆಗ ತಾನೇ ಬರುತ್ತಿರುವ ವಾನರರನ್ನೂ ಎಣಿಸಲು ಅವರಿಂದಾಗಲಿಲ್ಲ. ಅಷ್ಟರಲ್ಲಿ ವಿಭೀಷಣನು ಅಲ್ಲಿಗೆ ಬಂದು ಅವರಿಬ್ಬರನ್ನೂ ಹಿಡಿದು ರಾಮನೆದುರು ನಿಲ್ಲಿಸಿದನು. ಅವರು ರಾವಣನಿಂದ ಕಳುಹಲ್ಪಟ್ಟ ಆವನ ಮಂತ್ರಿಗಳಾದ ಶುಕಸಾರಣರೆಂದೂ ರಾಮನ ಸೇನಾಬಲವನ್ನು ತಿಳಿಯಲು ಬಂದೆವೆಂದೂ ನಿಜವನ್ನೇ ಹೇಳಿದರು. ಶ್ರೀರಾಮನು ಅವರ ಮಾತನ್ನು ಕೇಳಿ ನಕ್ಕನಲ್ಲದೆ ಸರ್ವಸೇನೆಯನ್ನೂ ಅವರಿಗೆ ತೋರಿಸುವಂತೆ ವಿಭೀಷಣನಿಗೆ ಹೇಳಿದನು. ರಾವಣನ ನಾಶಕ್ಕಾಗಿ ಬಂದಿರುವ ರಾಮನನ್ನು ನಾಳೆಯೇ ಇದಿರಿಸಲು ಸಿದ್ಧನಾಗಬೇಕೆಂಬ ತನ್ನ ಸಂದೇಶವನ್ನು ರಾವಣನಿಗೆ ತಿಳಿಸಬೇಕೆಂದೂ ಹೇಳಿದನು. ಅವರು ಶ್ರೀರಾಮನ ದಯೆಯಿಂದ ಬದುಕಿದೆವೆಂದು ರಾವಣನಲ್ಲಿಗೆ ಬಂದು ತಾವು ಕಂಡ ಸೇನೆಯನ್ನೂ ಶ್ರೀರಾಮನ ಶೌರ್ಯವನ್ನೂ ತಿಳಿಸಿದರು. ಧರ್ಮಾತ್ಮನಾದ ರಾಮನ ದಯೆಯಿಂದ ಬದುಕಿ ಬಂದೆವೆಂದೂ ನಿವೇದಿಸಿದರು. ಕೊನೆಯಲ್ಲಿ "ರಾಕ್ಷಸೇಂದ್ರ! ಶ್ರೀರಾಮನೊಡನೆ ದ್ವೇಷ ಬೇಡ. ಸೀತೆಯನ್ನು ಅವನಿಗೊಪ್ಪಿಸಿ ಸಂಧಿಮಾಡಿಕೊಳ್ಳುವುದೇ ಲೇಸು" ಎಂದು ಹೇಳಿದರು. ರಾವಣನು ಈ ಮಾತನ್ನು ಕಡೆಗಣಿಸಿ ತನ್ನನ್ನು ಜಯಿಸತಕ್ಕವರೇ ಇಲ್ಲವೆಂದುಕೊಂಡನು. ಆದರೂ ರಾಮನ ಸೈನ್ಯವನ್ನು ನೋಡಬೇಕೆಂದು ಉನ್ನತವಾದ ತನ್ನ ಅರಮನೆಯ ಉಪ್ಪರಿಗೆಯನ್ನೇರಿದನು. ಸಮುದ್ರತೀರದಲ್ಲಿ ಬೀಡುಬಿಟ್ಟಿರುವ ಅಪಾರವಾದ ವಾನರಸೇನೆಯನ್ನು ಕಂಡು ಬೆರಗಾದನು. ಅನಂತರ ಶುಕಸಾರಣರನ್ನು ಕರೆದು ಕಪಿಸೇನೆಯ ವೀರರಾರೆಂದು ತಿಳಿಸಲು ಅಪ್ಪಣೆಯಿತ್ತನು.

ಅವರು ವಾನರಸೇನೆಯ ವೀರರಾದ ಅಂಗದ, ನಳ, ಶರಭ, ಕುಮುದ, ಗವಯ, ಋಕ್ಷವಂತ, ಜಾಂಬವಂತ, ಗವಾಕ್ಷ, ಶತಬಲಿ ಮುಂತಾದವರನ್ನೂ ಶ್ರೀರಾಮ ಲಕ್ಷ್ಮಣ ಸುಗ್ರೀವರನ್ನೂ ತೋರಿಸಿದರು. "ಶ್ರೀರಾಮನು ರಾವಣ ನೊಂದಿಗೆ ಕಾದಾಡಲು ತವಕಗೊಂಡಿರುವನು. ಅವನನ್ನು ಜಯಿಸುವುದಕ್ಕೆ ನೀನು ಪ್ರಯತ್ನಿಸು. ನಮಗೆ ಪರಾಜಯವಾಗದಂತೆ ನೋಡಿಕೊಳ್ಳು" ಎಂದು ಹೇಳಿದರು. ಅವರನ್ನೆಲ್ಲ ನೋಡಿದ ರಾವಣನಿಗೆ ಕೋಪವೂ ಭಯವೂ ಒ ಮ್ಮೆಗೇ ಉಂಟಾಯಿತು. ತನ್ನೆದುರಿಗೇ ತನ್ನ ಶತ್ರುಗಳನ್ನು ಹೊಗಳುತ್ತಿರುವ ಆ ಮಂತ್ರಿಗಳನ್ನು ಅಲ್ಲಿಯೇ ಕೊಲ್ಲಬೇಕೆಂದು ಬಗೆದನು. ಆದರೆ ಅವರ ಹಿಂದಿನ ಉಪಕಾರಕ್ಕಾಗಿ ಅವರನ್ನು ಕ್ಷಮಿಸಿ ಅಲ್ಲಿಂದ ತೊಲಗಲು ಹೇಳಿದನು. ಅವರು ಹೋದೊಡನೆ ರಾವಣನು ನೀತಿವಿಶಾರದರಾದ ಶಾರ್ದೂಲನೇ ಮುಂ ತಾದ ಚಾರರನ್ನು ಶ್ರೀರಾಮನಲ್ಲಿಗೆ ಅಟ್ಟಿದನು. ಅವರಿಗೂ ಶುಕಸಾರಣರ ಗತಿಯೇ ಆಯಿತು. ಶ್ರೀರಾಮನ ದಯೆಯಿಂದವರು ಬದುಕಿಕೊಂಡು ಬಂದು ತಾವು ಕಂಡುದನ್ನು ನಿವೇದಿಸಿದರು. ಶ್ರೀರಾಮನು ಗರುಡವ್ಯೂಹವನ್ನು ರಚಿಸಿ ಲಂಕೆಯನ್ನು ಮುತ್ತಲು ಮುಂದಾಗಿರುವನೆಂದೂ ಅವನೊಂದಿಗೆ ಕಾದು ವುದಾಗಲೀ ಸೀತೆಯನ್ನವನಿಗೆ ಒಪ್ಪಿಸುವುದಾಗಲೀ ರಾವಣನನ್ನೇ ಕೂಡಿದೆ ಯೆಂದು ಶಾರ್ದೂಲನು ಅರಿಕೆಮಾಡಿಕೊಂಡನು. ಆದರೆ ರಾವಣನು ಮಾತ್ರ ತನ್ನ ನಿರ್ಧಾರದಿಂದ ಒಂದಿಷ್ಟೂ ಅಲುಗಲಿಲ್ಲ. ರಾಮನನ್ನು ಸಂಹರಿಸಿ ಸೀತೆ ಯೊಂದಿಗೆ ಸುಖಿಸುವುದೇ ಸೈ ಎಂದುಕೊಂಡನು.

ಕೂಡಲೇ ಅವನಿಗೆ ಸೀತೆಯನ್ನು ಕಂಡು ಆಕೆಯನ್ನು ಒಲಿಸಿಕೊಳ್ಳುವ ಆಶೆಯಾಯಿತು. ಅವನು ವಿದ್ಯುತ್‌ಜಿಹ್ವನೆಂಬ ರಾಕ್ಷಸನಿಗೆ ಮಾಯೆಯಿಂದ ರಾಮನ ತಲೆಯನ್ನೂ ಬಿಲ್ಲನ್ನೂ ಮಾಡಿಕೊಂಡು ತನ್ನೊಡನೆ ಬರಲು ಅಪ್ಪಣೆ ಯಿತ್ತನು. ತಾನು ವೀರಾವೇಷದ ಉಡುಗೆ ತೊಟ್ಟು ಅಶೋಕವನಕ್ಕೆ ಹೋದನು. ಅಲ್ಲಿ ಸೀತೆ ದೀನಳಾಗಿ ಕುಳಿತಿದ್ದಳು. ಮಲಗಿ ನಿದ್ರಿಸುತ್ತಿದ್ದ ರಾಮನ ಶಿರವನ್ನು ಪ್ರಹಸ್ತನು ಕಡಿದುತಂದನೆಂದು ರಾವಣನು ಸೀತೆಯೊಡನೆ ಹೇಳಿದನು. ಕೊನೆಗೆ "ಮಂಗಳಾಂಗಿ! ಇನ್ನಾದರೂ ರಾಮನ ಹಂಬಲಬಿಟ್ಟು ನನ್ನೊಡನೆ ಸುಖೋಪಭೋಗಗಳನ್ನು ಅನುಭವಿಸು" ಎಂದನು. ಆಗ ವಿದ್ಯುತ್‌ಜಿಹ್ವನು ರಾವಣನ ಅಪ್ಪಣೆಯಂತೆ ರಾಮನ ಶಿರವನ್ನೂ ಧನುಸ್ಸನ್ನೂ

ತಂದು ಸೀತೆಯ ಮುಂದಿರಿಸಿದನು. ಇದು ರಾಕ್ಷಸಮಾಯೆ ಎಂದು ಅವಳಿಗೆ ತಿಳಿಯಲಿಲ್ಲ. ಅವುಗಳನ್ನು ಕಂಡೊಡನೆ ಸೀತೆಯ ದುಃಖ ಕಟ್ಟೊಡೆದು ತೊರೆಯಂತಾಯಿತು. ಅವಳು ಆಯ್ಯೋ ಎಂದು ಗೋಳಿಟ್ಟಳು. ಅದರೊಂದಿಗೆ ಕೈಕೆಯನ್ನು ಹಳಿದಳು. ರಾಮನ ಗುಣಗಳನ್ನು ಕೊಂಡಾಡಿದಳು. ಕರುವಿಲ್ಲದ ವನದಂತೆ ಕೌಸಲ್ಯಾಮಾತೆಯ ಸ್ಥಿತಿಯಾಯಿತೆಂದು ಹಲುಬಿದಳು. "ಅಯ್ಯೋ! ಶ್ರೀರಾಮಾ! ನಿನಗೆ ನಾನೇ ಮೃತ್ಯುವಾದೆನಲ್ಲಾ" ಎಂದು ಅತಿಯಾಗಿ ದುಃಖಿಸಿದಳು.

ಅಷ್ಟರಲ್ಲಿ ದ್ವಾರಪಾಲಕನು ಅಲ್ಲಿಗೆ ಬಂದು ರಾಜಕಾರ್ಯಕ್ಕಾಗಿ ಪ್ರಹಸ್ತನು ಮಂತ್ರಿಗಳೊಂದಿಗೆ ಬಂದಿರುವುದಾಗಿ ತಿಳಿಸಿದನು. ಅದನ್ನು ಕೇಳಿ ರಾವಣನು ಅಲ್ಲಿಂದ ಹೊರಟು ಹೋದನು. ಆಗ ಆ ತಲೆಯೂ ಬಿಲ್ಲೂ ಮಾಯವಾಯಿತು. ಅಲ್ಲಿಂದ ರಾವಣನು ಹೋದೊಡನೆಯೇ ವಿಭೀಷಣನ ಹೆಂಡತಿಯಾದ ಸರಮೆಯು ಸೀತಾದೇವಿಯನ್ನು ಸಮಾಧಾನಪಡಿಸಿದಳು. ಶ್ರೀರಾಮನು ಲಂಕೆಗೆ ಬಂದಿರುವನೆಂದೂ ಬೀಡುಬಿಟ್ಟಿರುವ ಅವನನ್ನು ತಾನು ನೋಡಿರುವೆನೆಂದೂ ಆಕೆ ತಿಳಿಸಿದಳು. ಶ್ರೀರಾಮನ ಸೇನೆಯನ್ನು ಕಂಡು ರಾವಣನೂ ಭಯಗೊಂಡಿರುವನು. ಸೀತಾಪತಿಯನ್ನು ಯಾರೂ ಸಂಹರಿಸುವಂತಿಲ್ಲವೆಂದು ಧೈರ್ಯ ಹೇಳಿದಳು. ಆಗ ದೂರದಿಂದ ಭೇರಿಶಬ್ದಗಳೂ ಜಯಘೋಷಗಳೂ ಕೇಳಿಬಂದುವು.

ಶ್ರೀರಾಮನು ತನ್ನ ಸೇನೆಯೊಂದಿಗೆ ಲಂಕೆಯನ್ನು ಮುತ್ತುವನೆಂದು ತಿಳಿದ ರಾವಣನು ತನ್ನ ಮಂತ್ರಿಗಳನ್ನೂ ರಾಕ್ಷಸನಾಯಕರನ್ನೂ ಸೇರಿಸಿ ಅವರೊಂದಿಗೆ ಪರ್ಯಾಲೋಚನೆ ಮಾಡಿದನು. ಆಗ ರಾವಣನ ಮಾವನಾದ ಮಾಲ್ಯವಂತನು, ರಾಮನೊಂದಿಗೆ ಸಂಧಾನವೇ ಒಳಿತೆಂದು ಸೂಚಿಸಿದರೂ ರಾವಣನು ಅದಕ್ಕೆ ಸೊಪ್ಪುಹಾಕಲಿಲ್ಲ. ಸಮುದ್ರವನ್ನು ದಾಟಿಬಂದ ರಾಮನು ಇನ್ನು ಹಿಂತಿರುಗಲಾರನೆಂದು ಹೇಳುತ್ತ ತನ್ನನ್ನು ತಾನೇ ಹೊಗಳಿಕೊಂಡನು. ಅನಂತರ ನಗರದ ರಕ್ಷಣೆಗೆ ಭದ್ರವಾದ ವ್ಯವಸ್ಥೆಮಾಡಿದನು. ಪೂರ್ವದಿಕ್ಕಿನಲ್ಲಿ ಪ್ರಹಸ್ತನು, ಪಶ್ಚಿಮದಲ್ಲಿ ಇಂದ್ರಜಿತು, ಉತ್ತರದಲ್ಲಿ ಶುಕಸಾರಣರು, ದಕ್ಷಿಣದಲ್ಲಿ ಮಹಾಪಾರ್ಶ್ವ ಮಹೋದರರು, ನಗರಮಧ್ಯದಲ್ಲಿ ವಿರೂಪಾಕ್ಷನು ಇರು

ವಂತೆ ಆಜ್ಞಾಪಿಸಿದನು. ಈ ರೀತಿಯಲ್ಲಿ ಪುರರಕ್ಷಣೆಯನ್ನು ಮಾಡಿ ಸಂತೋಷ ಗೊಂಡನು.

ಆ ಕಾಲದಲ್ಲಿ ಶ್ರೀರಾಮನೂ ತನ್ನವರೊಂದಿಗೆ ಲಂಕೆಯನ್ನು ಮುತ್ತುವ ವಿಚಾರವನ್ನು ಆಲೋಚಿಸಿದನು. ಅಷ್ಟರಲ್ಲಿ ವಿಭೀಷಣನ ಮಂತ್ರಿಗಳು ರಾವ ಣನು ಮಾಡಿದ ನಗರರಕ್ಷಣೆಯ ಏರ್ಪಾಡನ್ನು ತಿಳಿದುಕೊಂಡು ಬಂದರು. ತಾವು ತಿಳಿದುದನ್ನು ವಿಭೀಷಣ ಸುಗ್ರೀವ ರಾಮಾದಿಗಳ ಮುಂದೆ ಹೇಳಿದರು. ಇದನ್ನು ಕೇಳಿದ ರಾಮನು ಕಪಿನಾಯಕರಿಗೆ ಲಂಕೆಯನ್ನು ಮುತ್ತುವ ಕುರಿತು ಅಪ್ಪಣೆಕೊಟ್ಟನು. ನೀಲನು ಪ್ರಹಸ್ತನನ್ನೂ ಹನುಮಂತನು ಇಂದ್ರಜಿತು ವನ್ನೂ ಅಂಗದನು ಮಹಾಪಾರ್ಶ್ವ ಮಹೋದರರನ್ನೂ ಸುಗ್ರೀವ ವಿಭೀಷಣರು ವಿರೂಪಾಕ್ಷನನ್ನೂ ಎದುರಿಸಿ ಮುಂದೊತ್ತಬೇಕೆಂದು ಹೇಳಿದನು. ತಾನು ಲಕ್ಷ್ಮಣನೊಂದಿಗೆ ರಾವಣನನ್ನು ಇದಿರಿಸಲು ಸಿದ್ಧನಾಗಿರುವೆನೆಂದೂ ಅವರಿಗೆ ತಿಳಿಸಿದನು. ಅದರೊಂದಿಗೆ ವಾನರರು ಯಾವ ರೀತಿಯ ರೂಪಾಂತರವನ್ನೂ ಧರಿಸಿ ಯುದ್ಧಮಾಡಕೂಡದೆಂದೂ ಎಚ್ಚರಿಸಿದನು. ಅನಂತರ ಶ್ರೀರಾಮನು ಲಂಕಾನಗರಿಯನ್ನು ನೋಡುವುದಕ್ಕಾಗಿ ಸುವೇಲ ಪರ್ವತದ ಶಿಖರವನ್ನೇರಿ ದನು. ಅವನೊಂದಿಗೆ ವಿಭೀಷಣ ಸುಗ್ರೀವಾದಿಗಳೂ ನಡೆದರು. ಆಗ ತಾನೇ ಚಂದ್ರೋದಯವಾಗಿ ಪೂರ್ಣಚಂದ್ರನ ಬೆಳದಿಂಗಳು ಲಂಕಾನಗರಿಯ ಮೇಲೆ ಬಿದ್ದಿತ್ತು. ಪ್ರಾಕಾರಗಳಿಂದಲೂ ಸೌಧಗಳಿಂದಲೂ ಉದ್ಯಾನಗಳಿಂದಲೂ ಕೂಡಿದ ಆ ನಗರದ ಶೋಭೆಯನ್ನು ಶ್ರೀರಾಮನು ದೂರದಿಂದಲೇ ಕಂಡನು. ಆ ನಗರದ ಹೆಬ್ಬಾಗಿಲಲ್ಲೇ ಕೆಂಪುವಸ್ತ್ರಾಲಂಕಾರಗಳಿಂದ ಶೋಭಿಸುವ ರಾವಣ ನನ್ನು ಸುಗ್ರೀವನು ನೋಡಿದನು. ಕೂಡಲೇ ಅವನು ಆಕಾಶಕ್ಕೆ ನೆಗೆದು ರಾವಣನಿದ್ದ ಸ್ಥಳವನ್ನು ಸೇರಿದನು. ತಾನು ಶ್ರೀರಾಮನ ಸ್ನೇಹಿತನೆಂದೂ ಭೃತ್ಯನೆಂದೂ ಹೇಳುತ್ತ ಅವನ ಕಿರೀಟವನ್ನು ಎಳೆದು ಭೂಮಿಗೆಸೆದನು. ರಾವಣನನ್ನೂ ಕೆಳಗೆ ಬೀಳುವಂತೆ ಮಾಡಿದನು. ರಾವಣನು ಕೂಡಲೇ ಮೇಲೇರಿ ಬಂದು ಸುಗ್ರೀವನ ಮೇಲೆ ಮಾಯೆಯನ್ನು ಪ್ರಯೋಗಿಸಲು ಹವ ಣಿಸಿದನು. ಅದನ್ನರಿತ ಸುಗ್ರೀವನು ಆಕಾಶಕ್ಕೆ ಹಾರಿ ರಾಮನೆಡೆಗೆ ಬಂದು ಬಿಟ್ಟನು. ರಾವಣನೊಡನೆ ಕಾದಾಡಿ ಬಂದ ಸುಗ್ರೀವನನ್ನು ರಾಮನು ಅಪ್ಪಿಕೊಂಡನು. ಪರಾಕ್ರಮಿಗಳಾದರೂ ದುಡುಕಬಾರದೆಂದನು. ಆಗ

ಸುಗ್ರೀವನು ಸೀತೆಯನ್ನು ಕದ್ದ ರಕ್ಕಸನನ್ನು ಕಂಡಾಗ ರೋಷವುಕ್ಕಿ ತಾನು ಹಾಗೆ ಮಾಡಿದೆನೆಂದು ಹೇಳಿದನು.

ಸುವೇಲ ಪರ್ವತದಿಂದ ಕೆಳಗಿಳಿದು ಬಂದ ಶ್ರೀರಾಮನು ಲಕ್ಷ್ಮಣ ನೊಡನೆ ಲಂಕಾನಗರಿಯನ್ನು ಮುತ್ತಲು ಹೊರಟನು. ಅವನನ್ನು ಅನು ಸರಿಸಿ ನೀಲ, ಅಂಗದ, ಹನುಮಂತ ಸುಗ್ರೀವಾದಿಗಳೂ ರಾಮನ ಅಪ್ಪಣೆ ಯಂತೆ ಆಯಾ ದ್ವಾರಗಳೆಡೆಗೆ ಸಾಗಿದರು. ಶ್ರೀರಾಮನು ಲಕ್ಷ್ಮಣನೊಂದಿಗೆ ಉತ್ತರ ದ್ವಾರದೆಡೆಗೆ ಹೋದನು. ಈ ರೀತಿಯಲ್ಲಿ ನಾಲ್ಕು ದಿಕ್ಕುಗಳಿಂದಲೂ ವಾನರಸೇನೆಯು ಲಂಕಾನಗರಿಯನ್ನು ಮುತ್ತತೊಡಗಿತು. ಎಲ್ಲೆಲ್ಲೂ ವಾನ ರರೆ ತುಂಬಿರುವುದನ್ನು ನೋಡಿ ಲಂಕೆಯ ರಾಕ್ಷಸರಿಗೆ ಆಶ್ಚರ್ಯವಾಯಿತು. ಯುದ್ಧನೀತಿಯನ್ನರಿತ ರಾಮನು ರಾವಣನೊಂದಿಗೆ ಯುದ್ಧಮಾಡುವ ಮೊ ದಲು ದೂತನೊಬ್ಬನನ್ನು ಕಳುಹಿಸುವುದು ನ್ಯಾಯವೆಂದು ಅಂಗದನನ್ನು ಆ ಕಾರ್ಯಕ್ಕಾಗಿ ನೇಮಿಸಿದನು. ರಾವಣನಿಗೆ ತಿಳಿಸಬೇಕಾದ ಸಂದೇಶವನ್ನು ಹೇಳಿದನು. ತೇಜಸ್ವಿಯಾದ ಅಂಗದನು ಶ್ರೀರಾಮ ಸಂದೇಶದೊಡನೆ ಆಕಾ ಶಕ್ಕೆ ಹಾರಿ ರಾವಣನ ಅರಮನೆಯನ್ನು ಸೇರಿದನು. ಅಲ್ಲಿ ರಾವಣನು ತನ್ನ ಮಂತ್ರಿಗಳೊಂದಿಗೆ ಮಂತ್ರಾಲೋಚನೆಯಲ್ಲಿದ್ದನು. ಅಂಗದನು ರಾವಣನ ಸಮೀಪದಲ್ಲೇ ನಿಂತು ಶ್ರೀರಾಮ ಸಂದೇಶವನ್ನು ಹೇಳಿದನು. "ರಾವಣನೆ! ಶ್ರೀರಾಮನ ದೂತನು ನಾನು. ವಾಲಿಯ ಪುತ್ರನಾದ ನನ್ನ ಹೆಸರು ಅಂಗದ ನೆಂದು. ಈಗ ಶ್ರೀರಾಮ ಸಂದೇಶವಿದನ್ನು ಕೇಳು. ನೀನು ಗಂಡುಸಾದರೆ ಊರ ಹೊರಗೆ ಬಂದು ಯುದ್ಧವೆಸಗು. ಇಲ್ಲವಾದರೆ ಸೀತೆಯನ್ನೊಪ್ಪಿಸಿ ಶರಣಾಗತನಾಗು".

ಅಂಗದನ ನುಡಿ ಕೇಳಿ ರಾವಣನು ರೋಷದಿಂದ ಕೆಂಡವಾದನು. ಆ ಕಪಿಯನ್ನು ಹಿಡಿದು ಕೊಲ್ಲಿರೆಂದನು. ಅವನನ್ನು ಹಿಡಿಯಲು ಬಂದ ರಾಕ್ಷಸ ರನ್ನೇ ಹಿಡಿದುಕೊಂಡು ಅಂಗದನು ಆಕಾಶಕ್ಕೆ ಹಾರಿ ಅವರನ್ನು ಕೆಳಕ್ಕೆ ಎಸೆ ದನು. ಆನಂತರ ರಾಮನ ಜಯಘೋಷ ಮಾಡುತ್ತ ರಾಮನೆಡೆಗೆ ಬಂ ದನು. ಅಂಗದನು ಮರಳಿದೊಡನೆ ವಾನರರು ನಾಲ್ಕು ದಿಕ್ಕಿನಿಂದ ಲಂಕೆಯನ್ನು ಮುತ್ತತೊಡಗಿದರು. ಇದನ್ನು ಕಂಡು ರಕ್ಕಸರು ಭಯದಿಂದ ಗೋಳಿಟ್ಟರು.

ವಾನರರು "ಶ್ರೀರಾಮನಿಗೆ ಜಯವಾಗಲಿ! ಸುಗ್ರೀವನಿಗೆ ಜಯವಾಗಲಿ!" ಎಂದು ಘೋಷಣೆಮಾಡುತ್ತ ಮುನ್ನುಗ್ಗಿದರು. ಕೋಟೆಯ ಗೋಡೆಗಳನ್ನೇರಿ ತೋರಣಗಳನ್ನು ಮುರಿದು ಮುಂದೊತ್ತಿದರು. ಕುಮುದ, ಶತಬಲಿ, ಸುಷೇಣರು ಪೂರ್ವ, ದಕ್ಷಿಣ, ಪಶ್ಚಿಮ ದ್ವಾರಗಳಲ್ಲಿ ರಾಕ್ಷಸರನ್ನೆದುರಿಸಿದರು. ಶ್ರೀರಾಮನು ಲಕ್ಷ್ಮಣನೊಂದಿಗೆ ಉತ್ತರ ದ್ವಾರದಲ್ಲಿ ರಾಕ್ಷಸರನ್ನು ಎದುರಿಸಿದನು. ರಾವಣನ ಆಜ್ಞೆಯಂತೆ ರಾಕ್ಷಸಸೇನೆಯೂ ಘೋರವಾದ ಆಯುಧಗಳನ್ನು ಝಳಪಿಸುತ್ತ ವಾನರರನ್ನು ತಡೆಗಟ್ಟಿತು. "ರಾಕ್ಷಸೇಶ್ವರನಿಗೆ ಜಯವಾಗಲಿ!" ಎಂದು ಘರ್ಜಿಸುತ್ತ ಅವರು ವಾನರರ ಮೇಲೆ ಬಿದ್ದರು. ರಾಕ್ಷಸವೀರರಾದ ರಶ್ಮಿಕೇತು, ಅಗ್ನಿಕೇತು, ಸುಪ್ತಘ್ನ, ಯಜ್ಞಕೋಪರು ಒಮ್ಮೆಗೇ ಶ್ರೀರಾಮನನ್ನು ಮುತ್ತಿದರು. ಆದರೇನು? ಕ್ಷಣಮಾತ್ರದಲ್ಲಿ ಅವರೆಲ್ಲರೂ ರಾಮಬಾಣಗಳಿಗೆ ಆಹುತಿಯಾದರು. ಅಷ್ಟರಲ್ಲಿ ಸೂರ್ಯನು ಮುಳುಗಿದನು. ಕತ್ತಲು ಕವಿಯಿತು. ಆದರೂ ಇತ್ತಂಡದವರೂ ಯುದ್ಧ ನಿಲ್ಲಿಸಲಿಲ್ಲ.

ಇಂದ್ರಜಿತುವನ್ನು ಇದಿರಿಸಲು ಹೋದ ಅಂಗದನು ಅವನ ರಥಾಶ್ವಸಾರಥಿಯರನ್ನು ನಾಶಮಾಡಿದನು. ಕೂಡಲೇ ಇಂದ್ರಜಿತು ಅದೃಶ್ಯನಾಗಿ ವಾನರರ ಮೇಲೆ ಬಾಣಗಳ ಮಳೆಗರೆದನು. ಎಷ್ಟು ಹುಡುಕಿದರೂ ಅವನು ವಾನರರಿಗೆ ಸಿಗಲಿಲ್ಲ. ಮಾಯಾಜಾಲದಿಂದ ಯುದ್ಧವೆಸಗುತ್ತಿರುವ ಇಂದ್ರಜಿತು ಸರ್ಪಬಾಣಗಳಿಂದ ರಾಮಲಕ್ಷ್ಮಣರನ್ನು ಬಂಧಿಸಿದನು. ನಾಗಪಾಶದಿಂದ ಬಂಧಿತರಾದ ರಾಮಲಕ್ಷ್ಮಣರು ಧರೆಗುರುಳಿದರು. ಅದನ್ನು ಕಂಡು ವಿಭೀಷಣ ಸುಗ್ರೀವಾದಿಗಳು ಅಲ್ಲಿಗೆ ಬಂದರು. ಆ ಸೋದರರ ಸ್ಥಿತಿಯನ್ನು ಕಂಡ ಕಪಿಗಳು ರೋದಿಸತೊಡಗಿದರು. ಇದನ್ನು ಕಂಡ ರಾಕ್ಷಸರು ರಾಮಲಕ್ಷ್ಮಣರಿಬ್ಬರೂ ಅಳಿದರೆಂದು ಸಂತೋಷದಿಂದ ಹಿಂತೆರಳಿದರು. ಇಂದ್ರಜಿತುವಿನ ವಿಜಯವಾರ್ತೆಯನ್ನು ಕೇಳಿ ರಾವಣನು ಹರ್ಷಗೊಂಡನು. ಆ ಹರ್ಷಭರದಲ್ಲೇ ಮಡಿದುಬಿದ್ದಿರುವ ರಾಮಲಕ್ಷ್ಮಣರಿರುವಲ್ಲಿಗೆ ಸೀತೆಯನ್ನೊಯ್ದು ಅವಳಿಗೆ ಅವರನ್ನು ತೋರಿಸಲು ಅಪ್ಪಣೆಮಾಡಿದನು. ಕೂಡಲೇ ರಾಕ್ಷಸಿಯರು ಸೀತೆಯನ್ನು ಪುಷ್ಪಕ ವಿಮಾನದಲ್ಲಿ ಕುಳ್ಳಿರಿಸಿ ಅಲ್ಲಿಗೊಯ್ದರು. ಪುಷ್ಪಕ ವಿಮಾನದಿಂದಲೇ ಸೀತೆಯು ಮಡಿದುಬಿದ್ದಿದ್ದ ವಾನರವೀರರನ್ನೂ ಎಚ್ಚರವಿಲ್ಲದೆ ಮಲಗಿದ್ದ ರಾಮಲಕ್ಷ್ಮಣರನ್ನೂ ಕಂಡಳು. ಆಗ ಅವಳ ದುಃಖವು

ಮಿತಿಮೀರಿತು. "ಕಡಲನ್ನು ದಾಟಿ ಬಂದ ಇವರಿಗೆ ಈ ಗತಿಯಾಯಿತಲ್ಲಾ! ವನವಾಸ ಮುಗಿಸಿ ಈಗ ಬರುವನೆಂದು ಅಲ್ಲಿ ದೂರದಲ್ಲಿರುವ ಕೌಸಲ್ಯಾ ಮಾತೆಗಿದು ತಿಳಿದಾಗ ಅವರ ಸ್ಥಿತಿಯೇನಾದೀತು?" ಎಂದು ಅವರಿಗಾಗಿ ಹಲುಬಿದಳು. ಆಗ ತ್ರಿಜಟೆಯು ರಾಮಲಕ್ಷ್ಮಣರು ಸತ್ತಿಲ್ಲವೆಂದು ಸೀತೆಗೆ ಸಮಾಧಾನಪಡಿಸಿದಳು. ಅಷ್ಟರಲ್ಲಿ ಪುಷ್ಪಕ ವಿಮಾನವು ಅಶೋಕವನಕ್ಕೆ ಹಿಂತಿರುಗಿ ಬಂತು. ವಿಮಾನದಿಂದ ಇಳಿದ ಸೀತೆ ರಾಮಲಕ್ಷ್ಮಣರಿಗಾಗಿ ಮತ್ತೂ ಚಿಂತಿಸಿದಳು.

ಅತ್ತ ಶ್ರೀರಾಮನು ಮೊದಲು ಮೂರ್ಛೆ ತಿಳಿದೆದ್ದನು. ಪಕ್ಕದಲ್ಲೇ ಬಿದ್ದಿರುವ ಲಕ್ಷ್ಮಣನಿಗಾಗಿ ಅವನೂ ದುಃಖಿಸಿದನು. ಶ್ರೀರಾಮನ ದುಃಖದ ಮಾತುಗಳನ್ನು ಕೇಳಿ ಕಪಿಗಳೂ ಕಣ್ಣೀರುಗರೆದರು. ಅಷ್ಟರಲ್ಲಿ ಆಕಾಶದ ಮೋಡಗಳನ್ನು ಚದರಿಸುತ್ತ ಸಾಗರದ ನೀರನ್ನು ಮೇಲಕ್ಕೆರಚುತ್ತ, ಗಿಡ ಮರಗಳನ್ನು ಮುರಿದಿಕ್ಕುತ್ತ ಬಲವಾದ ಗಾಳಿಯು ಬೀಸಿತು. ಆ ಗಾಳಿ ಯಿಂದ ಶ್ರೀರಾಮಲಕ್ಷ್ಮಣರನ್ನು ಬಂಧಿಸಿದ್ದ ನಾಗಪಾಶವು ಸಡಿಲವಾಯಿತು. ಅಷ್ಟರೊಳಗೆ ತೇಜಸ್ವಿಯಾದ ಗರುಡನು ಅಲ್ಲಿಗೆ ಬಂದನು. ಅವನನ್ನು ಕಂಡಾಗ ನಾಗಗಳೆಲ್ಲ ಚದರಿಹೋದುವು. ಗರುಡನು ರಾಮಲಕ್ಷ್ಮಣರ ದೇಹ ವನ್ನು ಸವರಿದನು. ಅವರನ್ನು ಮುತ್ತಿರುವ ಕ್ರೂರ ಸರ್ಪಗಳೆಲ್ಲ ಕದ್ರುವಿನ ಮಕ್ಕಳೆಂಬುದನ್ನು ತಿಳಿಸಿ, ಅವರಿಗೆ ಬಂದ ಈ ವಿಪತ್ತು ಈಗ ಪರಿಹಾರ ವಾಯಿತೆಂದನು. ಮುಂದೆ ಮಾಯಾವಿಗಳಾದ ರಾಕ್ಷಸರೊಂದಿಗೆ ಎಚ್ಚರದಿಂದ ಕಾದಬೇಕೆಂದು ತಿಳಿಸಿ ರಾಮಲಕ್ಷ್ಮಣರನ್ನು ಅಪ್ಪಿಕೊಂಡು ಆಕಾಶಮಾರ್ಗ ವಾಗಿ ಹಾರಿ ಹೋದನು. ಇದರಿಂದ ವಾನರಸೇನೆಯ ಸಂತೋಷವು ಇಮ್ಮಡಿ ಯಾಯಿತು. ಅವರ ಹರ್ಷಧ್ವನಿಗಳು ದಿಕ್ಕುದಿಕ್ಕುಗಳಿಗೂ ಮುಟ್ಟಿದುವು.

ಈ ಹರ್ಷಧ್ವನಿಯನ್ನು ಕೇಳಿದ ರಾವಣನು ಅದರ ಕಾರಣ ತಿಳಿಯಲು ದೂತರನ್ನು ಅಟ್ಟಿದನು. ಇಂದ್ರಜಿತುವಿನ ನಾಗಪಾಶವು ವ್ಯರ್ಥವಾಯಿತೆಂದು ತಿಳಿದ ರಾವಣನಿಗೆ ಒಮ್ಮೆಗೇ ಆಶ್ಚರ್ಯವಾಯಿತು. ಕೂಡಲೇ ಅವನು ವೀರ ನಾದ ಧೂಮ್ರಾಕ್ಷನನ್ನು ಕರೆದು ಯುದ್ಧಕ್ಕೆ ಕಳುಹಿಸಿದನು. ತನಗಾದ ಅಪ ಶಕುನಗಳನ್ನೂ ಲೆಕ್ಕಿಸದೆ ಧೂಮ್ರಾಕ್ಷನು ವಾನರರ ಮೇಲೆ ಬಿದ್ದನು. ಇವನಿಂದ

ನಾಶವಾದ ವಾನರರನ್ನು ಕಂಡು ಹನುಮಂತನು ದೊಡ್ಡ ಮರವನ್ನೇ ಹಿಡಿದು ಕೊಂಡು ಬಂದು ಧೂಮ್ರಾಕ್ಷನನ್ನು ಅಪ್ಪಳಿಸಿದನು. ಆ ಹತಿಯಿಂದ ಧೂಮ್ರಾ ಕ್ಷನು ಮಡಿದು ಬಿದ್ದನು. ಹನುಮಂತನ ಶೌರ್ಯಕ್ಕಾಗಿ ವಾನರರೆಲ್ಲ ಸಂ ತೋಷಗೊಂಡರು. ಧೂಮ್ರಾಕ್ಷನು ಮಡಿದನೆಂದು ಕೇಳಿದಾಗ ರಾವಣನು ವಜ್ರದಂಷ್ಟ್ರನೆಂಬ ರಾಕ್ಷಸನನ್ನು ಕಳುಹಿಸಿದನು. ಮಾಯಾವಿಯಾದ ವಜ್ರ ದಂಷ್ಟ್ರನೊಂದಿಗೆ ಯುದ್ಧವೆಸಗಲು ಅಂಗದನೇ ಮುಂದಾಗಿ ಬಂದನು. ಅವ ರಿಬ್ಬರಿಗೂ ಭಯಂಕರವಾಗಿ ಯುದ್ಧವಾಯಿತು. ಅಂಗದನು ವಜ್ರದಂಷ್ಟ್ರನ ಕತ್ತಿಯನ್ನೇ ಸೆಳೆದು ಅವನ ತಲೆಯನ್ನು ಕತ್ತರಿಸಿಬಿಟ್ಟನು. ವಜ್ರದಂಷ್ಟ್ರನ ಸಾವಿನ ಸುದ್ದಿಯಿಂದ ರೋಷಗೊಂಡ ರಾವಣನು ಮಹಾವೀರನೂ ಯುದ್ಧ ಪ್ರಿಯನೂ ಆದ ಅಕಂಪನನನ್ನು ರಾಮಲಕ್ಷ್ಮಣರೊಡನೆ ಯುದ್ಧಕ್ಕೆ ಕಳುಹಿ ಸಿದನು. ಅಕಂಪನನ ರಾಕ್ಷಸಸೇನೆಗೂ ವಾನರಸೇನೆಗೂ ಘೋರವಾದ ಸಮರವಾಯಿತು. ಅಕಂಪನನ ಬಾಣಹತಿಗೆ ಕಪಿಗಳೆಲ್ಲ ತತ್ತರಿಸಿಹೋದರು. ಅದನ್ನು ಕಂಡು ಮಾರುತಿಯು ಅಲ್ಲಿಗೆ ಬಂದು ಅಕಂಪನನ ಮೇಲೆ ಬಿದ್ದನು. ಇಬ್ಬರಿಗೂ ಬಲವಾದ ಸೆಣಸಾಟವಾಯಿತು. ಕೊನೆಗೆ ಹನುಮಂತನು ಹೆಮ್ಮರವೊಂದನ್ನು ಕಿತ್ತು ಅಕಂಪನನನ್ನು ಹೊಡೆಯತೊಡಗಿದನು. ಹನು ಮಂತನು ಅವನ ತಲೆಗೆ ಹೊಡೆದ ಪೆಟ್ಟನ್ನು ತಾಳಲಾರದೆ ಆ ರಾಕ್ಷಸನು ಕೆಳಗೆ ಬಿದ್ದು ಮಡಿದನು. ಗೆದ್ದ ವಾನರರು ಹನುಮಂತನನ್ನು ಹೊಗಳುತ್ತ ಜಯಘೋಷವೆಬ್ಬಿಸಿದರು.

ಅಕಂಪನನು ಮಡಿದನೆಂದು ಕೇಳಿ ರಾವಣನು ಕ್ಷಣಕಾಲ ಚಿಂತಿಸಿ ದನು. ಮಂತ್ರಿಗಳೊಡನೆ ಆಲೋಚನೆಮಾಡಿ ನಗರ ರಕ್ಷಣೆಯನ್ನು ಭದ್ರಗೊಳಿ ಸಿದನು. ಅನಂತರ ಪ್ರಹಸ್ತನನ್ನು ಕರೆದು ಅವನೇ ಈ ವೇಳೆಯಲ್ಲಿ ಯುದ್ಧಕ್ಕೆ ಹೋಗಬೇಕೆಂದನು. ಆ ಮಹಾಮಂತ್ರಿಯು ಆಗ ಕೂಡಾ ಸೀತೆಯನ್ನು ರಾಮ ನಿಗೊಪ್ಪಿಸುವುದು ಒಳಿತೆಂದು ತಿಳಿಸಿದನು. ಅದನ್ನು ರಾವಣನು ಒಪ್ಪದಿರಲು ಪ್ರಹಸ್ತನು ಅಗ್ನಿಯನ್ನು ಪೂಜಿಸಿ, ಬ್ರಾಹ್ಮಣರಿಗೆ ನಮಸ್ಕರಿಸಿ ಯುದ್ಧಕ್ಕೆ ಹೊರಟನು. ಅವನೊಂದಿಗೆ ರಾಕ್ಷಸವೀರರೂ ಸಿಂಹನಾದ ಮಾಡುತ್ತ ಕಪಿ ಸೇನೆಯ ಮೇಲೆ ಬಿದ್ದರು. ರಾಕ್ಷಸರ ಉತ್ಸಾಹವನ್ನು ಕಂಡು ಕಪಿಸೇನೆ ಹಿಮ್ಮೆಟ್ಟತೊಡಗಿತು. ಆಗ ವೀರನಾದ ನೀಲನು ಕಪಿಗಳನ್ನೆಲ್ಲ ಹುರಿಗೊಳಿ

ಸುತ್ತ ರಾಕ್ಷಸರ ಮೇಲೆ ಬಿದ್ದನು. ನೀಲನಿಗೂ ಪ್ರಹಸ್ತನಿಗೂ ಮಹಾ ಹೋರಾಟವಾಯಿತು. ಕೊನೆಯಲ್ಲಿ ನೀಲನು ದೊಡ್ಡದೊಂದು ಕಲ್ಲನ್ನೆತ್ತಿ ಪ್ರಹಸ್ತನ ತಲೆಯನ್ನೇ ನುಚ್ಚುನೂರಾಗಿ ಮಾಡಿದನು. ರಾಕ್ಷಸ ಸೇನಾ ಪತಿಯು ಮಡಿದನೆಂದು ಕೇಳಿದೊಡನೆ ರಾಕ್ಷಸರೆಲ್ಲ ಚೆಲ್ಲಾಪಿಲ್ಲಿಯಾಗಿ ಓಡಿ ಹೋದರು.

ಪ್ರಹಸ್ತನ ಸಾವಿನ ಸುದ್ದಿಯು ರಾವಣನನ್ನು ಚಿಂತೆಗೀಡುಮಾಡಿತು. ಆದರೂ ಅವನು ಎದೆಗೆಡಲಿಲ್ಲ. ತಾನೇ ತನ್ನ ವೀರಸೇನೆಯೊಂದಿಗೆ ಯುದ್ಧಕ್ಕೆ ಹೊರಟನು. ಅವನೊಂದಿಗೆ ಇಂದ್ರಜಿತು, ಅತಿಕಾಯ, ಮಹೋದರರೇ ಮುಂತಾದ ವೀರರೂ ಹೊರಟರು. ತನ್ನೆಡೆಗೆ ಬರುತ್ತಿರುವ ರಾಕ್ಷಸಸೇನೆ ಯನ್ನು ಶ್ರೀರಾಮನು ದೂರದಿಂದಲೇ ನೋಡಿದನು. ವಿಭೀಷಣನು ಅವನಿಗೆ ರಾವಣಾದಿಗಳನ್ನು ತೋರಿಸಿ ಪರಿಚಯ ಮಾಡಿದನು. ಅವರನ್ನು ಕಂಡೊ ಡನೆ ಶ್ರೀರಾಮನ ಕ್ರೋಧವಿಮ್ಮಡಿಸಿತು. ಆಗ ಲಕ್ಷ್ಮಣನು ಮುಂದೆ ಬಂದು ರಾವಣನೊಡನೆ ತಾನೇ ಯುದ್ಧಕ್ಕೆ ಹೋಗುವೆನೆಂದನು. ರಾಮನು ಅದಕ್ಕೊಪ್ಪಿ ಅವನೊಂದಿಗೆ ಹನುಮಂತ ಸುಗ್ರೀವಾದಿಗಳನ್ನೂ ಕಳುಹಿಸಿದನು. ಕಪಿವೀರರೊಂದಿಗೆ ಬಂದ ಲಕ್ಷ್ಮಣನು ರಾಕ್ಷಸಸೇನೆಯನ್ನು ಇದಿರಿಸಿದನು. ಅಷ್ಟರಲ್ಲಿ ನೀಲನೂ ಬಂದು ಆವರನ್ನು ಸೇರಿಕೊಂಡನು. ರಾವಣನು ನೇರ ವಾಗಿ ಲಕ್ಷ್ಮಣನ ಮೇಲೆಯೇ ಬಿದ್ದನು. ಶಕ್ತ್ಯಾಯುಧದಿಂದ ಲಕ್ಷ್ಮಣನನು ಹೊಡೆದನು. ಅದರ ಪೆಟ್ಟಿಗೆ ಲಕ್ಷ್ಮಣನು ಕುಸಿದು ಬಿದ್ದನು. ಆಗ ಹನು ಮಂತನು ರಾವಣನ ಮೇಲೆ ಬಿದ್ದು ಅವನನ್ನು ಗುದ್ದಿ ಗುದ್ದಿ ಕೆಡವಿದನು. ರಾವಣನು ರಕ್ತಕಾರುತ್ತ ಮೂರ್ಛೆಹೋದನು. ಕೂಡಲೇ ಹನುಮಂತನು ಲಕ್ಷ್ಮಣನನ್ನು ರಾಮನೆಡೆಗೊಯ್ದನು. ಅಲ್ಲಿ ಲಕ್ಷ್ಮಣನು ಚೇತರಿಸಿಕೊಳ್ಳು ವಷ್ಟರಲ್ಲಿ ಇತ್ತ ರಾವಣನೂ ಚೇತರಿಸಿ ಯುದ್ಧಕ್ಕೆ ಅಣಿಯಾದನು. ಆಗ ಶ್ರೀರಾಮನೇ ಆಂಜನೇಯನ ಹೆಗಲನ್ನೇರಿ ರಾವಣನನ್ನು ಎದುರಿಸಿದನು. ರಾಮನು ರಾವಣನು ಕೆರಳುವಂತೆ ನುಡಿದ ವೀರವಾಕ್ಕುಗಳನ್ನು ಕೇಳಿ ಅವನು ಕೋಪಗೊಂಡು ಹನುಮಂತನ ಮೇಲೆ ಬಾಣಗಳ ಸುರಿಮಳೆ ಸುರಿಸಿ ದನು. ಆಗ ರಾಮನು ರಾವಣನ ರಥಾಶ್ವ ಸಾರಥಿಗಳನ್ನು ಹೊಡೆದು ಕೆಡವಿ ದನು. ಅದನ್ನು ಕಂಡು ರಾವಣನು ವಿಷವಳಿದ ಹಾವಿನಂತೆ ನಿಂತನು.

ಅವನ ಆ ಸ್ಥಿತಿಯನ್ನು ಕಂಡು ರಾಮನು ಅವನನ್ನು ಮೂದಲಿಸಿದನು. "ರಾವಣ, ನೀನೀಗ ಬಳಲಿರುವೆ. ಲಂಕೆಯನ್ನು ಸೇರಿ ವಿಶ್ರಮಿಸಿ ಬಾ" ಎಂದನು. ಆ ಮಾತನ್ನು ಕೇಳಿ ರಾವಣನು ಮದಕುಗ್ಗಿದ ಆನೆಯಂತೆ ಲಂಕೆಯನ್ನು ಸೇರಿದನು.

ಶ್ರೀರಾಮನಿಂದ ಭಂಗಿತನಾಗಿ ಮರಳಿದ ರಾವಣನು ಮನಸ್ಸಿನಲ್ಲೇ ಕುಗ್ಗಿಹೋದನು. ಮಾನವನಿಗೆ ತಾನು ಹೆದರುವಂತಾದುದಕ್ಕೆ ನಾಚಿದನು. ಆಗ ಅವನಿಗೆ ಹಿಂದೆ ಬ್ರಹ್ಮನು ಹೇಳಿದ ಮಾತುಗಳೂ, ಜೈತ್ರಯಾತ್ರೆಗೆ ಹೋದವನು ವೇದವತಿಯನ್ನು ಕೆಣಕಿದಾಗ ಆಕೆ ಕೊಟ್ಟ ಶಾಪವೂ, ಕೈಲಾಸ ಗಿರಿಯನ್ನು ಅಲ್ಲಾಡಿಸಹೋದಾಗ ಉಮಾಮಹೇಶ್ವರರು ಹೇಳಿದ ಮಾತೂ ನೆನಪಿಗೆ ಬಂದುವು. ಅಂದು ಅವನು ಋಷಿಗಳಿಗೆ ಕೊಟ್ಟ ಹಿಂಸೆ, ಅವರು ಸಂಕಟದಿಂದ ಇವನಿಗಿತ್ತ ಶಾಪಗಳೆಲ್ಲವೂ ನೆನಪಾದುವು. ಅದರಿಂದ ರಾವ ಣನ ದೇಹದಂತೆ ಮನವೂ ಜರ್ಜರಿತವಾಯಿತು. ಆಗ ಅವನಿಗೆ ಕುಂಭ ಕರ್ಣನ ನೆನಪಾಗಿ ಕುಂಭಕರ್ಣನನ್ನೇ ಯುದ್ಧಕ್ಕೆ ಕಳುಹಿಸುವ ನಿರ್ಧಾರ ಮಾಡಿ ಅವನನ್ನು ನಿದ್ರೆಯಿಂದ ಎಬ್ಬಿಸಲು ದೂತರನ್ನು ಅಟ್ಟಿದನು.

ರಾವಣನ ಸಹೋದರನಾದ ಕುಂಭಕರ್ಣನು ಮಹಾ ವೀರನು. ಆದರೆ ಕೇಳುಸುಖಗಳಲ್ಲಿ ಆಸಕ್ತಿಗೊಂಡು ಯಾವಾಗಲೂ ನಿದ್ರೆಯಲ್ಲೇ ಮುಳುಗಿರು ವವನು. ಒಮ್ಮೆ ಮಲಗಿದನೆಂದರೆ ಮತ್ತೆ ಆರು ತಿಂಗಳು ನಿದ್ರೆಯಲ್ಲೇ ಇರು ವವನು. ಅಂದು ಅವನು ಮಲಗಿ ಬರೇ ಒಂಭತ್ತು ದಿನಗಳಾಗಿದ್ದುವು. ರಾಕ್ಷಸರು ಬಹಳ ಪ್ರಯತ್ನಪಟ್ಟು ಕುಂಭಕರ್ಣನನ್ನು ಎಬ್ಬಿಸಿ ಮಾಂಸಮದ್ಯ ಗಳನ್ನು ಅವನಿಗೆ ತಿನ್ನುವುದಕ್ಕೆ ಕೊಟ್ಟರು. ಅನಂತರ ರಾವಣನಿಗೊದಗಿದ ಸಂಕಷ್ಟವನ್ನು ತಿಳಿಸಿದರು. ಅಣ್ಣನಿಗೆ ಅಪಜಯವಾಯಿತೆಂದು ಕೇಳಿ ಕುಂಭ ಕರ್ಣನು ಕೋಪದಿಂದ ಕೆಂಡವಾದನು. ಕೂಡಲೇ ಅಣ್ಣನಿದ್ದಲ್ಲಿಗೆ ನಡೆದನು. ಕುಂಭಕರ್ಣನು ಬಂದೊಡನೆ ರಾವಣನು ಇದಿರು ಬಂದು ಅವನನ್ನು ಆಲಿಂ ಗಿಸಿಕೊಂಡನು. ರಾವಣನು ಈ ಹಿಂದೆ ವಿಭೀಷಣ ಕುಂಭಕರ್ಣರ ಮಾತು ಕೇಳುತಿದ್ದರೆ ಇಂತಾಗುತ್ತಿದ್ದಿಲ್ಲವೆಂಬುದನ್ನು ಕುಂಭಕರ್ಣನು ಆಗ ರಾವಣನಿಗೆ ಮತ್ತೊಮ್ಮೆ ತಿಳಿಸಿದನು. ಇದರಿಂದ ರಾವಣನು ಮತ್ತಷ್ಟು ಉದ್ವಿಗ್ನನಾದನು.

"ತಿಳಿದೋ ತಿಳಿಯದೆಯೋ ಈ ಕೆಲಸ ಮಾಡಿಯಾಗಿದೆ. ನಿನಗೆ ನನ್ನಲ್ಲಿ ಪ್ರೀತಿವಿಶ್ವಾಸಗಳಿದ್ದರೆ ಪರಾಕ್ರಮದಿಂದ ಶತ್ರುದಮನ ಮಾಡು. ಇಲ್ಲವಾದರೆ ಮನಬಂದಂತೆ ವರ್ತಿಸು" ಎಂದನು. ಕುಂಭಕರ್ಣನು ರಾವಣನನ್ನು ಸಮಾಧಾನಪಡಿಸಿ ಯುದ್ಧಕ್ಕೆ ಹೊರಟನು.

ರಾಕ್ಷಸಸೇನೆಯೊಂದಿಗೆ ರಣಭೂಮಿಗೆ ಬಂದ ಕುಂಭಕರ್ಣನು ಸಿಂಹನಾದ ಮಾಡಿದನು. ಭಯಂಕರ ಧ್ವನಿಯ ಭಯಂಕರಾಕಾರದ ರಾಕ್ಷಸನನ್ನು ಕಂಡು ಕಪಿಸೇನೆ ಹೆದರಿತು. ಆಗ ಅಂಗದನು ಅವರ ಎದುರಿಗಿರುವ ವ್ಯಕ್ತಿ ಸಜೀವ ರಾಕ್ಷಸನಲ್ಲವೆಂದೂ ನಿರ್ಜೀವ ಭೂತವೆಂದೂ ಹೇಳಿ ಅವರನ್ನು ಹುರಿದುಂಬಿಸಿದನು. ಕಪಿಗಳು ಮರಗಳಿಂದಲೂ ಕಲ್ಲುಗಳಿಂದಲೂ ಕುಂಭಕರ್ಣನನ್ನು ಹೊಡೆಯಲು ಬಂದರು. ಅವನು ಆ ಕಪಿಗಳನ್ನೆಲ್ಲ ಒಮ್ಮೆಗೇ ನೆಲಕ್ಕೊರಗಿಸಿಬಿಟ್ಟನು. ವಾನರರು ಹೀಗೆ ನಾಶವಾಗಲು ಉಳಿದವರು ಓಡಿಹೋಗಿ ರಾಮನಿಗೆ ಈ ಸುದ್ದಿಯನ್ನು ತಿಳಿಸಿದರು. ಅಷ್ಟರಲ್ಲಿ ಅಂಗದನೊಬ್ಬನೇ ಕುಂಭಕರ್ಣನೊಡನೆ ಹೋರಾಡುತ್ತಿರುವಲ್ಲಿಗೆ ಸುಗ್ರೀವನೂ ಬಂದು ಸೇರಿದನು. ಸುಗ್ರೀವನಿಗೂ ಕುಂಭಕರ್ಣನಿಗೂ ಭಯಂಕರ ಯುದ್ಧವಾಯಿತು. ಕುಂಭಕರ್ಣನ ಪೆಟ್ಟಿಗೆ ಸುಗ್ರೀವನು ಕುಸಿದುಬಿದ್ದನು. ಕೂಡಲೇ ಅವನು ಸುಗ್ರೀವನನ್ನು ಎತ್ತಿಕೊಂಡು ಲಂಕೆಗೆ ನಡೆದನು. ಕುಂಭಕರ್ಣನು ವಿಜಯದಿಂದ ಬರುತ್ತಿರುವುದನ್ನು ಕಂಡು ಲಂಕೆಯ ರಾಕ್ಷಸಾಂಗನೆಯರು ಅವನ ಮೇಲೆ ಹೂಮಳೆ ಸುರಿಸಿದರು. ಇದರಿಂದಾಗಿ ಸುಗ್ರೀವನಿಗೆ ಚೇತನ ಬಂತು. ಅವನು ಕೂಡಲೇ ಕುಂಭಕರ್ಣನನ್ನು ಕಚ್ಚಿ ಪರಚಿ ಗಾಯಗೊಳಿಸಿದನು. ಅವನ ಕೈಯಿಂದ ತಪ್ಪಿಸಿಕೊಂಡು ಶ್ರೀರಾಮನಿದ್ದಲ್ಲಿಗೆ ಹಾರಿ ಬಂದನು.

ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲವೆಂಬಂತಾಯಿತು ಕುಂಭಕರ್ಣನಿಗೆ. ಅವನು ಮರಳಿ ಯುದ್ಧರಂಗಕ್ಕೆ ಬಂದನು. ಮೊದಲು ಲಕ್ಷ್ಮಣನು ಕುಂಭಕರ್ಣನನ್ನು ಎದುರಿಸಿ ಏಳು ಕೂರಂಬುಗಳನ್ನು ಎಸೆದನು. ಅದನ್ನು ಗಣಿಸದೆ ಕುಂಭಕರ್ಣನು ರಾಮನನ್ನೇ ನುಂಗುವೆನೆಂದು ನೇರಾಗಿ ರಾಮನ ಹತ್ತಿರ ಧಾವಿಸಿ ಬಂದನು. ಆಗ ಶ್ರೀರಾಮನು ಭಯಂಕರವಾದ ಬಾಣಗಳನ್ನು ಪ್ರಯೋಗಿಸಿದನು. ಅದರಿಂದಾಗಿ ಕುಂಭಕರ್ಣನು ನಿರಾಯುಧನಾಗಿ

ಹೋದನು. ಆಗ ಅವನು ದೊಡ್ಡ ಪರ್ವತವನ್ನೇ ಎತ್ತಿ ರಾಮನ ಮೇಲೆ ಒಗೆದನು. ರಾಮನು ಅದರಿಂದ ತಪ್ಪಿಸಿಕೊಂಡು ಅನೇಕ ರುದ್ರಶರಗಳಿಂದ ರಾಕ್ಷಸನನ್ನು ಹೊಡೆದನು. ಆದರೆ ಅವುಗಳೆಲ್ಲ ವಿಫಲವಾದುವು. ಆಗ ಶ್ರೀರಾಮನು ಕಡುಮುಳಿದು ವಾಯವ್ಯಾಸ್ತ್ರ ಐಂದ್ರಾಸ್ತ್ರಗಳಿಂದ ಕುಂಭಕರ್ಣನ ತೋಳುಗಳನ್ನು ಕತ್ತರಿಸಿದನು. ಮತ್ತೆರಡು ಅಸ್ತ್ರಗಳಿಂದ ಕಾಲುಗಳನ್ನೂ ಕತ್ತರಿಸಿದನು. ಆದರೂ ಕುಂಭಕರ್ಣನು ಕುಪ್ಪಳಿಸುತ್ತ ರಾಮನನ್ನು ನುಂಗಲು ಬಂದನು. ಅವನ ಈ ಸಾಮರ್ಥ್ಯಕ್ಕೆ ಶ್ರೀರಾಮನು ಬೆರಗಾದನು. ಮತ್ತೊಮ್ಮೆ ಐಂದ್ರಾಸ್ತ್ರವನ್ನು ಪ್ರಯೋಗಿಸಿ ಅವನ ರುಂಡವನ್ನು ಛೇದಿಸಿದನು. ಕುಂಭಕರ್ಣನು ಮಡಿದನೆಂದು ವಾನರರೆಲ್ಲ ಸಂತಸದಿಂದ ಕುಣಿದಾಡಿದರು.

ಕುಂಭಕರ್ಣನ ಮರಣದಿಂದ ರಾವಣನು ಚಿಂತೆಯಿಂದ ಕಂಗಾಲಾದನು. ತಾನಿನ್ನು ಜೀವಿಸುವುದೇ ವ್ಯರ್ಥವೆಂದು ಗೋಳಾಡಿದನು. ಆಗ ತ್ರಿಶಿರಸ್ಕನೆಂಬ ರಾಕ್ಷಸವೀರನು ಬಂದು ರಾವಣನನ್ನು ಸಮಾಧಾನಗೊಳಿಸಿದನು. ರಾವಣನಿಂದ ಅಪ್ಪಣೆ ಪಡೆದು ರಣರಂಗಕ್ಕೆ ಹೊರಟನು. ಅವನೊಡನೆ ದೇವಾಂತಕ ನರಾಂತಕರೆಂಬ ರಾಕ್ಷಸರೂ ಕೂಡಿಕೊಂಡು ಉತ್ಸಾಹದಿಂದ ಮುನ್ನಡೆದರು. ವಾನರರ ಮೇಲೆ ಬಿದ್ದ ಅವರು ಅಂಗದ ನಳ ಮುಂತಾದ ವಾನರವೀರರಿಂದ ಹತರಾದರು. ಇದನ್ನು ತಿಳಿದೊಡನೆ ರಾಕ್ಷಸರೆಲ್ಲ ದಿಕ್ಕುಗೆಟ್ಟು ಓಡಲಾರಂಭಿಸಿದರು. ಅದನ್ನು ಕಂಡು ರಾವಣನ ಮಗನಾದ ಅತಿಕಾಯನು ರಾಕ್ಷಸರನ್ನೆಲ್ಲ ಒಟ್ಟುಗೂಡಿಸಿ ದಿವ್ಯವಾದ ರಥವನ್ನೇರಿ ರಣರಂಗಕ್ಕೆ ನುಗ್ಗಿದನು. ವಾನರಸೇನೆಯ ಕುಮುದ, ದ್ವಿವಿದ, ಮೈಂದ, ನೀಲ, ಶರಭರೆಂಬ ಐವರು ಕಪಿವೀರರು ಅತಿಕಾಯನನ್ನು ಇದಿರಿಸಿದರು. ಆದರೆ ಅತಿಕಾಯನೆದುರು ಅವರು ಸೋಲುವಂತಾಯಿತು. ಆಗ ಶ್ರೀರಾಮನ ಆಜ್ಞೆಪಡೆದು ಲಕ್ಷ್ಮಣನೇ ಅತಿಕಾಯನ ಮೇಲೇರಿ ಬಂದನು. ಲಕ್ಷ್ಮಣನ ಹಲವಾರು ಅಸ್ತ್ರಗಳನ್ನು ಅತಿಕಾಯನು ಭಗ್ನಗೊಳಿಸಿದನು. ಆಗ ಲಕ್ಷ್ಮಣನು ವಾಯುದೇವನ ಸಲಹೆಯಂತೆ ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸಿ ಅತಿಕಾಯನಿಗೆ ಪ್ರಯೋಗಿಸಿದನು. ಅತಿಕಾಯನು ಅದನ್ನು ನಿವಾರಿಸಲು ಸಾವಿರಾರು ಬಾಣಪ್ರಯೋಗ ಮಾಡಿದರೂ ಪ್ರಯೋಜನವಾಗಲಿಲ್ಲ. ಆ ಅಸ್ತ್ರವು ನೇರಾಗಿ ಬಂದು ಅವನ ತಲೆಯನ್ನೇ ಕತ್ತರಿಸಿತು. ವಿಜಯವೀರನಾದ ಲಕ್ಷ್ಮಣನ ಸುತ್ತುಮುತ್ತಲು

ಕಪಿವೀರರೆಲ್ಲ ಸಂತೋಷದಿಂದ ಕುಣಿಯುತ್ತ ನಲಿಯುತ್ತ ಜಯಘೋಷ ವೆಬ್ಬಿಸಿದರು.

ಅತಿಕಾಯನ ಮರಣವಾರ್ತೆಯು ರಾವಣನನ್ನು ದಾರುಣವಾದ ವ್ಯಥೆಗೀಡುಮಾಡಿತು. ಆದರಿಂದ ಚೇತರಿಸಿಕೊಂಡ ರಾವಣನು ಅವನಿಗರಿಯದಂತೆ ರಾಮನ ಘನತೆಯನ್ನು ಕೊಂಡಾಡಿದನು. ಅವನು ಸಾಕ್ಷಾತ್ ನಾರಾಯಣ ಸ್ವರೂಪಿಯೇ ಆಗಿರಬೇಕೆಂಬ ಮಾತು ರಾವಣನಿಗರಿಯದಂತೆ ಅವನ ನಾಲಗೆಯಲ್ಲಿ ನಲಿದಾಡಿತು. ತಂದೆಯ ಈ ಅಸಾಹಸ್ಥಿತಿಯನ್ನು ಕಂಡು ಇಂದ್ರಜಿತು ರಣರಂಗಕ್ಕೆ ಮುನ್ನುಗ್ಗಲು ಅನುಮತಿ ಬೇಡಿದನು. ರಾವಣನು ಹಿರಿಯ ಮಗನ ಉತ್ಸಾಹವನ್ನು ಕಂಡು ಅವನನ್ನು ಹರಸಿ ಬೀಳ್ಕೊಟ್ಟನು.

ರಣರಂಗವನ್ನು ಸೇರಿದ ಇಂದ್ರಜಿತು ತನ್ನ ಸೇನೆಯನ್ನು ಯೋಗ್ಯರೀತಿಯಲ್ಲಿ ನಿಲ್ಲಿಸಿ, ವಿಧಿಪೂರ್ವಕವಾಗಿ ಯಜ್ಞೇಶ್ವರನನ್ನು ಪೂಜಿಸಿದನು. ಅವನಿಂದ ಬ್ರಹ್ಮಾಸ್ತ್ರವೇ ಮೊದಲಾದ ಮಹಾ ಅಸ್ತ್ರಗಳನ್ನು ಪಡೆದು ಯುದ್ಧೋನ್ಮುಖನಾಗಿ ಸಿಂಹನಾದ ಮಾಡಿದನು. ಆ ಘರ್ಜನೆಗೆ ವಾನರರು ಹೆದರಿದರು. ವಾನರವೀರರಾದ ಗಂಧಮಾಗದ, ನಳ, ನೀಲ, ಅಂಗದ, ಆಂಜನೇಯಾದಿಗಳೆಲ್ಲ ಪೆಟ್ಟುತಿಂದು ಚೇತನವಿಲ್ಲದಾದರು. ಅದರೊಂದಿಗೆ ಇಂದ್ರಜಿತು ಪ್ರಯೋಗಿಸಿದ ಬಾಣಗಳು ರಾಮಲಕ್ಷ್ಮಣರಿಗೂ ತಾಗಿ ಅವರಿಬ್ಬರೂ ಧರೆಗೆ ಉರುಳಿದರು. ಅವರು ಮೂರ್ಛಿತರಾದುದೇ ತಡ, ವಾನರರೆಲ್ಲ ಕಂಗಾಲಾಗಿ ಗೋಳಿಡತೊಡಗಿದರು. ಆಗ ವಿಭೀಷಣನು ಅಲ್ಲಿಗೆ ಬಂದು ವಾನರರನ್ನು ಸಂತೈಸತೊಡಗಿದನು. ಅಷ್ಟರಲ್ಲಿ ಹನುಮಂತಾದಿಗಳು ಎಚ್ಚರಗೊಂಡರು. ಹನುಮಂತನು ಜಾಂಬವಂತನ ಸೂಚನೆಯಂತೆ ಹಿಮವತ್ಪರ್ವತದಲ್ಲಿರುವ ಔಷಧಿ ಪರ್ವತಕ್ಕೆ ಹಾರಿದನು. ಜಾಂಬವನು ಹೇಳಿದ ಮೂಲಿಕೆ ಸಿಗದಿರಲು ಅವನು ಆ ಪರ್ವತದ ಶಿಖರವನ್ನೆತ್ತಿಕೊಂಡೇ ಲಂಕೆಗೆ ಮರಳಿದನು. ಔಷಧಿ ಪರ್ವತದ ಮೂಲಿಕೆಗಳ ವಾಸನೆಯಿಂದಲೇ ರಾಮಲಕ್ಷ್ಮಣರು ಎಚ್ಚರಗೊಂಡರು. ಆ ಮೂಲಿಕೆಗಳ ಪ್ರಭಾವದಿಂದ ಎಲ್ಲ ಕಪಿವೀರರೂ ಚೇತನಗೊಂಡರು. ಅನಂತರ ಹನುಮಂತನು ಔಷಧಿ ಪರ್ವತವನ್ನು ಅದರ ಸ್ವಸ್ಥಾನದಲ್ಲಿರಿಸಿ ಬಂದನು.

ಔಷಧಿಯಿಂದ ಚೇತನಗೊಂಡ ವಾನರರು ರಾತ್ರಿ ಲಂಕಾನಗರಿಗೆ ಬೆಂಕಿಯಿಟ್ಟರು. ಲಂಕೆಯನ್ನು ಸುಟ್ಟು ಧ್ವಂಸಮಾಡುತಿದ್ದ ವಾನರರ ಮೇಲೆ ಯೂಪಾಕ್ಷ ಪ್ರಜಂಘಾಸುರ ಮುಂತಾದ ರಾಕ್ಷಸರು ಬಿದ್ದರು. ಅಂಗದಾದಿಗಳು ಅವರನ್ನೂ ಇತರ ರಾಕ್ಷಸರನ್ನೂ ಧ್ವಂಸಮಾಡಿದರು. ಇದನ್ನು ಕಂಡು ಕುಂಭಕರ್ಣನ ಮಗನಾದ ಕುಂಭನು ವಾನರರ ಮೇಲೆ ಬಿದ್ದನು. ಕುಂಭನೊಡನೆ ಹೋರಾಡುತಿದ್ದ ಅಂಗದನೇ ಮೊದಲಾದವರು ಹಿಮ್ಮೆಟ್ಟುವ ಸ್ಥಿತಿಗೆ ಬಂದಾಗ ಜಾಂಬವ, ಸುಷೇಣ, ವೇಗದರ್ಶಿಗಳೆಂಬ ಕಪಿವೀರರು ಅವರ ಬೆಂಬಲಕ್ಕೆ ಬಂದರು. ಸುಗ್ರೀವನೂ ಅಲ್ಲಿಗೆ ಧಾವಿಸಿ ಬಂದನು. ಸುಗ್ರೀವನ ವಜ್ರಮುಷ್ಟಿಯ ಪೆಟ್ಟಿಗೆ ಕುಂಭನು ರಕ್ತಕಾರಿ ಮಡಿದು ಬಿದ್ದನು. ಅಷ್ಟರಲ್ಲಿ ಅಲ್ಲಿಗೆ ನಿಕುಂಭನು ಬಂದು ತನ್ನ ಪ್ರಾಣವನ್ನು ಕಳೆದುಕೊಂಡನು. ಆಗ ಖರನ ಮಗನಾದ ಮಕರಾಕ್ಷನು ರಾವಣನ ಅಪ್ಪಣೆಯಂತೆ ಯುದ್ಧಕ್ಕೆ ಮುನ್ನುಗ್ಗಿ ಬಂದನು. ಅವನನ್ನು ಶ್ರೀರಾಮನೇ ಇದಿರಿಸಿ ವಧಿಸಿದನು.

ಮಕರಾಕ್ಷ ಮಡಿದನೆಂದು ತಿಳಿದ ರಾವಣನು ಮತ್ತೊಮ್ಮೆ ಇಂದ್ರಜಿತುವನ್ನು ಸಮರಕ್ಕೆ ಕಳುಹಿಸಿದನು. ಇಂದ್ರಜಿತು ರಣರಂಗದಲ್ಲಿ ಯಜ್ಞೇಶ್ವರನನ್ನು ಪೂಜಿಸಿ, ಮೇಕೆಯ ಆಹುತಿಕೊಟ್ಟು, ವರಗಳನ್ನು ಪಡೆದನು. ಆನಂತರ ಮಾಯಾ ರಥವನ್ನೇರಿ ರಾಮಾದಿಗಳ ಮೇಲೆ ಶರಗಳನ್ನು ಸುರಿಸತೊಡಗಿದನು. ಮಾಯೆಯಿಂದ ಸಮರವೆಸಗುತಿದ್ದ ಇಂದ್ರಜಿತುವಿಗೊಂದು ಉಪಾಯ ಹೊಳೆಯಿತು. ಅವನು ಕೂಡಲೇ ಮಾಯಾಸೀತೆಯನ್ನು ನಿರ್ಮಿಸಿ, ಆಕೆಯ ಮುಂದಲೆಯನ್ನು ಹಿಡಿದೆಳೆದುಕೊಂಡು ರಣರಂಗಕ್ಕೆ ಬಂದನು. ವಾನರರೆದುರಿಗೆ ಕತ್ತಿಯನ್ನು ಹಿರಿದು, ಕೂಗುತ್ತಿರುವ ಆ ಸೀತೆಯ ಕೊರಳು ಕತ್ತರಿಸಿದನು. ಅದನ್ನು ಕಂಡು ನಿರಾಶೆಯಿಂದ ಮಾರುತಿಯು ರಾಮನೆಡೆಗೆ ನಡೆದನು. ಆ ಸಮಯವನ್ನು ಸಾಧಿಸಿ ಇಂದ್ರಜಿತು ಚೈತ್ಯನಿಕುಂಭಿಲಾ ಎಂಬ ದೇವಸ್ಥಾನದಲ್ಲಿ ಮಹತ್ತಾದ ಹೋಮಮಾಡತೊಡಗಿದನು.

ರಾಮನನ್ನು ಸೇರಿದ ಮಾರುತಿ ತಾನು ಕಂಡುದನ್ನು ನಿವೇದಿಸಿದನು. ಇದನ್ನು ಕೇಳಿದೊಡನೆ ರಾಮನು ಮೂರ್ಛಿತನಾಗಿ ಕೆಳಗೆ ಬಿದ್ದನು. ಅವನನ್ನು ಲಕ್ಷ್ಮಣಾದಿಗಳು ಉಪಚರಿಸುತ್ತಿರಲು ವಿಭೀಷಣನು ಅಲ್ಲಿಗೆ ಬಂದು

ಆದು ಇಂದ್ರಜಿತುವಿನ ಮಾಯೆಯೆಂದು ತಿಳಿಸಿದನು. ಇಂದ್ರಜಿತುವು ನಿಕುಂಭಿಲಾ ದೇವಸ್ಥಾನದಲ್ಲಿ ಮಾಡುತ್ತಿರುವ ಮಹಾಯಜ್ಞದ ಕುರಿತು ಹೇಳಿ ಯಜ್ಞ ಪೂರ್ಣವಾಗುವುದರೊಳಗೆ ಅವನನ್ನು ವಧಿಸಬೇಕೆಂದೂ ಅನಂತರ ಅವನು ಅಜೇಯನಾಗುವನೆಂದೂ ತಿಳಿಸಿದನು. ಆ ಮಾತನ್ನು ಕೇಳಿ ರಾಮನು ಲಕ್ಷ್ಮಣನೊಡನೆ ಹನುಮಂತ ಜಾಂಬವಂತರನ್ನು ಇಂದ್ರಜಿತುವಿನ ವಧೆಗಾಗಿ ಕಳುಹಿಸಿದನು. ವಿಭೀಷಣನು ಅವರಿಗೆ ದಾರಿತೋರಿಸಲು ಹೊರಟನು.

ಅದರಂತೆ ಅವರೆಲ್ಲರೂ ನಿಕುಂಭಿಲಾ ದೇವಾಲಯದೆಡೆಗೆ ಸಾಗಿದರು. ಅಲ್ಲಿ ಇಂದ್ರಜಿತುವು ಹೋಮಮಾಡುತ್ತಿರುವುದನ್ನು ತಡೆದು ಅವನನ್ನು ಕೆರಳಿಸಿ ಯುದ್ಧಕ್ಕೆ ಬರುವಂತೆ ಮಾಡಿದರು. ಲಕ್ಷ್ಮಣನೊಡನೆ ವಿಭೀಷಣನಿರುವುದನ್ನು ಕಂಡು ಅವನು ಕಟುನುಡಿಗಳಿಂದ ವಿಭೀಷಣನನ್ನು ನಿಂದಿಸಿದನು. ಅನಂತರ ಇಂದ್ರಜಿತು ಲಕ್ಷ್ಮಣರೊಳಗೆ ಭಯಂಕರ ಸಮರವಾಯಿತು. ಆದರೆ ಇಬ್ಬರೂ ಹಿಮ್ಮೆಟ್ಟಲಿಲ್ಲ. ಇಬ್ಬರೂ ಸಮಬಲರಾಗಿಯೇ ಕಾದಿದರು. ಅಷ್ಟರಲ್ಲಿ ಲಕ್ಷ್ಮಣನು ಇಂದ್ರಜಿತುವಿನ ಸಾರಥಿಯನ್ನು ವಧಿಸಿ ರಥವನ್ನು ಪುಡಿಮಾಡಿದನು. ಭೂಮಿಗೆ ಹಾರಿ ಮುಂಬರುತ್ತಿರುವ ಇಂದ್ರಜಿತುವಿನ ಮೇಲೆ ಲಕ್ಷ್ಮಣನು ಐಂದ್ರಾಸ್ತ್ರವನ್ನು ಅಭಿಮಂತ್ರಿಸಿ ಪ್ರಯೋಗಿಸಿದನು. ಅದು ಅವನ ರುಂಡವನ್ನು ಕತ್ತರಿಸಿ ಹಾರಿಹೋಯಿತು. ಇಂದ್ರಜಿತು ಮಡಿದನೆಂದು ರಾಕ್ಷಸರೆಲ್ಲ ಓಡಿಹೋದರು. ಪ್ರಬಲನಾದ ಒಬ್ಬ ಶತ್ರು ಮಡಿದನೆಂದು ವಾನರರೆಲ್ಲ ಸಂತೋಷದಿಂದ ಶಿಬಿರ ಸೇರಿದರು. ಲಕ್ಷ್ಮಣನ ಪರಾಕ್ರಮಕ್ಕೆ ರಾಮನು ಅವನನ್ನು ಅಪ್ಪಿಕೊಂಡು ಆನಂದಬಾಷ್ಪದಿಂದ ಮನ್ನಿಸಿದನು.

ಮಗನ ಮರಣವಾರ್ತೆಯಿಂದ ಲಂಕೇಶನಿಗೆ ಅತಿ ದಾರುಣವಾದ ದುಃಖವಾಯಿತು. ಅವನು ಬಹಳವಾಗಿ ಹಲುಬಿದನು. ತನಗಿನ್ನು ಜಗತ್ತೇ ಶೂನ್ಯವೆಂದು ಗೋಳಿಟ್ಟನು. ಆ ದುಃಖವೇ ರೋಷವಾಗಿ ಪರಿಣಮಿಸಲು ರಾವಣನು ಯುದ್ಧಕ್ಕೆ ಹೊರಡುವೆನೆಂದು ಬಗೆದನು. ಅಷ್ಟರಲ್ಲಿ ಅವನಿಗೊಂದು ಯೋಚನೆ ಹೊಳೆಯಿತು. ಈ ಘೋರಗಳಿಗೆ ಕಾರಣಳಾದ ಸೀತೆಯನ್ನೇ ವಧಿಸುವೆನೆಂದು ಖಡ್ಗಹಿರಿದು ಅಶೋಕವನಕ್ಕೆ ಧಾವಿಸಿದನು. ಖಡ್ಗಹಿರಿದು ತನ್ನೆಡೆಗೆ ಬರುತ್ತಿರುವ ದುಷ್ಟನನ್ನು ಕಂಡು ಸೀತೆ ಕಂಗೆಟ್ಟಳು. ಅವಳ ಆ ಸ್ಥಿತಿ

ಯನ್ನು ಕಂಡು ಮನಕರಗಿದ ಸುಪಾರ್ಶ್ವನೆಂಬ ಮಂತ್ರಿಯು ರಾವಣನೊಡನೆ ಸ್ತ್ರೀಹತ್ಯೆಮಾಡಬಾರದಾಗಿ ಪ್ರಾರ್ಥಿಸಿದನು. ರಾವಣನಿಗೇಕೋ ಮಂತ್ರಿಯ ಮಾತು ಸರಿಯೆನಿಸಿತು. ಅದರಂತೆ ಹಿಂತಿರುಗಿ ನಡೆದನು. ಅರಮನೆ ಸೇರಿದ ರಾವಣನು ತನ್ನ ಮೂಲಬಲವನ್ನು ಒಟ್ಟುಗೂಡಿಸಿ ರಣರಂಗಕ್ಕೆ ಕಳುಹಿಸಿದನು. ತಮ್ಮ ರಾಜನ ವ್ಯಥೆಯನ್ನು ಹೋಗಲಾಡಿಸಬೇಕೆಂದು ಅವರು ಜೀವದ ಆಸೆ ತೊರೆದು ಕಾದಿದರು. ಇದರಿಂದ ವಾನರಸೇನೆ ಭಯದಿಂದ ಚೆದರಿಹೋಯಿತು. ಆಗ ಶ್ರೀರಾಮನು ಅವರನ್ನು ಇದಿರಿಸಿ ನಾಶಮಾಡಿದನು. ಅಳಿದುಳಿದವರು ಓಡಿಹೋದರು.

ರಾವಣನ ಮೂಲಬಲವು ನಾಶವಾಯಿತೆಂದು ಕೇಳಿ ಲಂಕೆಯ ಜನರೆಲ್ಲ ಶೋಕಸಾಗರದಲ್ಲಿ ಮುಳುಗಿದರು. ತಮ್ಮ ಮಡಿದ ಬಂಧುಗಳನ್ನು ನೆನೆನೆನೆದು ಕಣ್ಣೀರು ಸುರಿಸಿದರು. ಆಗ ಅವರು ಶೂರ್ಪನಖೆಯನ್ನೂ, ರಾವಣನನ್ನು ಯುದ್ಧಕ್ಕೆ ಹುರಿದುಂಬಿಸಿದ ರಾಕ್ಷಸರನ್ನೂ ಹಳಿದರು. ಲಂಕೆಯಿಂತು ದುಃಖಿಸುತ್ತಿರುವಾಗ ರಾವಣನನ್ನೂ ದುಃಖವು ಆವರಿಸದೆ ಇರಲಿಲ್ಲ. ಅವನು ಮಡಿದ ಮಕ್ಕಳನ್ನೂ ಸೇನಾಪತಿಗಳನ್ನೂ ರಾಕ್ಷಸವೀರರನ್ನೂ ನೆನೆದು ಅವರಿಗೆಲ್ಲ ಕಣ್ಣೀರಿನ ಅಂಜಲಿ ಅರ್ಪಿಸಿದನು. ಆ ಮೇಲೆ ಧೈರ್ಯವನ್ನು ತಂದುಕೊಂಡು ತನ್ನ ಹಿಂದಿನ ಪ್ರತಾಪವನ್ನು ನೆನೆದುಕೊಂಡು ಯುದ್ಧಕ್ಕೆ ಸಿದ್ಧನಾದನು. ಅವನ ಅಪ್ಪಣೆಯಂತೆ ಎಂಟು ಕುದುರೆಗಳನ್ನು ಕಟ್ಟಿದ ರಥವು ಸಿದ್ಧವಾಯಿತು. ಮಹಾ ಮಹಾ ಆಯುಧಗಳನ್ನು ಇರಿಸಿರುವ ಆ ರಥವನ್ನೇರಿ ರಾವಣನು ರಣರಂಗಾಭಿಮುಖನಾದನು. ಅವನೊಡನೆ ರಾಕ್ಷಸಸೇನೆಯು ಮಹಾ ಘೋಷಣೆಮಾಡುತ್ತ ಮುಂದುವರಿಯಿತು. ಆಗ ಆ ವರೆಗೆ ಆಗದ ಅನೇಕ ಅಪಶಕುನಗಳಾದುವು. ಆದರೂ ಅವನ್ನೆಲ್ಲ ಲೆಕ್ಕಿಸದೆ ರಾವಣನು ರಣರಂಗಕ್ಕೆ ನುಗ್ಗಿದನು.

ರಾವಣನ ಭಯಂಕರವಾದ ಶರಗಳೆದುರು ವಾನರಸೇನೆಯು ತತ್ತರಿಸಿ ಓಡಿಹೋಯಿತು. ಅದನ್ನು ಕಂಡು ಸುಗ್ರೀವಾದಿಗಳು ಕಪಿವೀರರನ್ನು ಹುರಿದುಂಬಿಸುತ್ತ ಬಂದರು. ಆಗ ರಾವಣನ ಸೇನಾಪತಿಯಾದ ವಿರೂಪಾಕ್ಷನು ಅವರ ಮೇಲೆ ಬಿದ್ದನು. ಅವರೆ ಅವನೇ ಮಡಿದನಲ್ಲದೆ ಕಪಿವೀರರನ್ನು

ಹಿಮ್ಮೆಟ್ಟಿಸಲಾಗಲಿಲ್ಲ. ಇದರಿಂದ ಕೆರಳಿದ ರಾವಣನು ತನ್ನ ಸಾರಥಿಗೆ ಹೇಳಿ, ನೇರವಾಗಿ ರಾಮನಿರುವಲ್ಲಿಗೆ ತನ್ನ ರಥವನ್ನೊಯ್ದನು. ರಾಮನನ್ನು ನೋಡಿ ದೊಡನೆ ರಾವಣನ ಕ್ರೋಧಾಗ್ನಿ ಧಗಧಗನೆ ಸುಡಲಾರಂಭಿಸಿತು. ಆ ವೇಳೆಗೆ ಸರಿಯಾಗಿ ಶ್ರೀರಾಮನು ಮಹೋತ್ಸಾಹದಿಂದ ರಾವಣನ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದನು. ರಾಮನು ಪ್ರಯೋಗಿಸಿದ ಅಸ್ತ್ರಗಳನ್ನೆಲ್ಲ ರಾವ ಣನು ಮಧ್ಯಮಾರ್ಗದಲ್ಲೇ ಕತ್ತರಿಸಿದನು. ಅಷ್ಟರಲ್ಲಿ ಅಲ್ಲಿಗೆ ಬಂದ ವಿಭೀ ಷಣನು ರಾವಣನ ರಥದ ಕುದುರೆಗಳನ್ನು ಸಂಹರಿಸಿದನು. ಇದರಿಂದ ಕೋಪ ಗೊಂಡ ರಾವಣನು ಅವನ ಮೇಲೆ ಶಕ್ತ್ಯಾಯುಧವನ್ನು ಪ್ರಯೋಗಿಸಿದನು. ಅದನ್ನು ಲಕ್ಷ್ಮಣನು ತಡೆದು ಮೂರು ಬಾಣಗಳಿಂದ ಪುಡಿಮಾಡಿದನು. ಅದರಿಂದ ಕೆರಳಿದ ರಾವಣನು ಲಕ್ಷ್ಮಣನ ಮೇಲೆ ಮತ್ತೊಂದು ಶಕ್ತ್ಯಾಯುಧ ವನ್ನು ಪ್ರಯೋಗಿಸಿದನು. ಇದರಿಂದ ಘಾಸಿಯಾದ ಲಕ್ಷ್ಮಣನು ಧರೆಗೆ ಉರುಳಿ ಮೂರ್ಛೆಹೋದನು. ಅದನ್ನು ಕಂಡು ರಾಮನು ಕಣ್ಣೀರು ಮಿಡಿದನು. ಕ್ಷಣಕ್ಷಣಕ್ಕೆ ಕ್ಷೀಣಿಸುತ್ತಿರುವ ಲಕ್ಷ್ಮಣನನ್ನು ಕಂಡು ರಾಮನ ಕಳವಳ ಹೆಚ್ಚಾಯಿತು. ಆಗ ಸುಷೇಣನ ಸೂಚನೆಯಂತೆ ಹನುಮಂತನು ಔಷಧಿ ಪರ್ವತಕ್ಕೆ ಹೋಗಿ ಅದರ ಶಿಖರವನ್ನೇ ತಂದನು. ಸುಷೇಣನು ವಿಶಲ್ಯ ಕರಣಿ, ಸಾವರ್ಣಕರಣಿ, ಸಂಜೀವಿನಿ, ಸಂಧಾನಕರಣಿಗಳೆಂಬ ಮೂಲಿಕೆಗ ಳಿಂದ ಲಕ್ಷ್ಮಣನನ್ನು ಚೇತನಗೊಳಿಸಿದನು. ಶ್ರೀರಾಮನಾಗ ಆನಂದದಿಂದ ಅವನನ್ನು ಆಲಿಂಗಿಸಿಕೊಂಡನು. ಅದನ್ನು ಕಂಡು ಕಪಿಗಳೆಲ್ಲ ಕುಣಿದಾಡಿದರು.

ಆ ಮೇಲೆ ಶ್ರೀರಾಮನೇ ರಾವಣನ ವಧೆಗಾಗಿ ಕೋದಂಡವನ್ನೆತ್ತಿ ಕೊಂಡು ಹೊರಟನು. ಆಗ ರಾಮನಿಗಾಗಿ ದೇವೇಂದ್ರನು ತನ್ನ ರಥವನ್ನು ಸಾರಥಿಯೊಡನೆ ಕಳುಹಿಸಿದನು. ಶ್ರೀರಾಮನು ಅದನ್ನೇರಿ ರಾವಣನಿಗೆ ಇದಿರಾದನು. ರಾಮನ ಠೇಂಕಾರವನ್ನು ಕೇಳಿ ರಾವಣನು ಅವನೆಡೆಗೆ ತನ್ನ ರಥವನ್ನು ಮುಂದೊತ್ತಿದನು. ರಾಮ ರಾವಣರೊಳಗೆ ಭೀಕರವಾದ ಯುದ್ಧ ವಾಯಿತು. ಗಂಧರ್ವಾಸ್ತ್ರ, ಗರುಡಾಸ್ತ್ರ, ಶೂಲಾಯುಧ ಮುಂತಾದ ರುದ್ರಾಸ್ತ್ರ ಗಳಿಂದಲೇ ಅವರಿಬ್ಬರೂ ಕಾದಿದರು. ಕೊನೆಗೆ ಶ್ರೀರಾಮನು ಇಂದ್ರನಿತ್ತ ಶಕ್ತ್ಯಾಯುಧವನ್ನು ರಾವಣನ ಮೇಲೆಸೆದನು. ಶ್ರೀರಾಮನ ಬಾಣಗಳು ಬಿರುಸಾಗುವುದನ್ನು ಕಂಡು ರಾವಣನು ಅಳುಕಿಹೋದನು. ಅದನ್ನರಿತು

ಆವನ ಸಾರಥಿಯು ಕೂಡಲೇ ರಥವನ್ನು ಹಿಂದಕ್ಕೆ ತಂದನು. ಆದನ್ನು ಕಿಳಿ ದೊಡನೆ ರಾವಣನು ಅವನನ್ನು ಗದರಿಸಿ ಮತ್ತೊಮ್ಮೆ ರಾಮನೆದುರಿಗೆ ಹೋಗಿ ಪುನಃ ಯುದ್ಧಮಾಡಿದನು. ರಾಮ ರಾವಣರ ಯುದ್ಧವು ಮತ್ತೂ ಘೋರ ವಾಯಿತು. ಅದನ್ನು ಕಂಡು ಇತ್ತಂಡದ ವೀರರೂ ಯುದ್ಧನಿರೀಕ್ಷಣೆಯಲ್ಲೇ ಅವಾಕ್ಕಾಗಿ ನಿಂತುಬಿಟ್ಟರು. ಶ್ರೀರಾಮನು "ಕ್ಷುರ"ವೆಂಬ ತೀಕ್ಷ್ಣಬಾಣ ದಿಂದ ರಾವಣನ ತಲೆಯನ್ನೇ ಕತ್ತರಿಸಿದನು. ಆ ತಲೆಯು ಭೂಮಿಗೆ ಬೀಳು ವಷ್ಟರಲ್ಲಿ ಅವನ ಮುಂಡದಲ್ಲಿ ಇನ್ನೊಂದು ತಲೆಯು ಮೂಡಿ ಬಂತು. ಈ ರೀತಿಯಲ್ಲಿ ನೂರು ಬಾರಿ ಶ್ರೀರಾಮನು ತಲೆಯನ್ನು ಕತ್ತರಿಸಿದರೂ ರಾವಣನ ವಧೆಯಾಗಲಿಲ್ಲ. ಅಷ್ಟು ಹೊತ್ತಿಗೆ ಇಂದ್ರನ ಸಾರಥಿಯಾದ ಮಾತಲಿಯು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಲು ಸೂಚಿಸಿದನು. ಅದರಂತೆ ಶ್ರೀರಾಮನು ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸಿ ರಾವಣನ ವಕ್ಷಸ್ಥಳಕ್ಕೆಸೆದನು. ಅದು ರಾವ ಣನ ವಕ್ಷವನ್ನು ಭೇದಿಸಿಕೊಂಡು ಮತ್ತೆ ರಾಮನ ಬತ್ತಳಿಕೆಯನ್ನು ಸೇರಿತು. ಒಡನೆ ರಾವಣನ ದೇಹವು ರಥದಿಂದ ಕೆಳಗೆ ಬಿದ್ದಿತು.

ತಮ್ಮ ರಾಜನು ಮಡಿದನೆಂದು ಉಳಿದ ರಾಕ್ಷಸರು ಓಡಿಹೋದರು. ವಾನರರು ಸಂತೋಷದಿಂದ ಕೋಲಾಹಲವೆಬ್ಬಿಸಿದರು. ಆಗ ಸುಖಸ್ಪರ್ಶವಾದ ಗಾಳಿಯು ಬೀಸಿತು. ಪುಷ್ಪವೃಷ್ಟಿಯಾಯಿತು. ಸುಗ್ರೀವಾದಿಗಳು ವಿಜಯಿ ಯಾದ ಶ್ರೀರಾಮಚಂದ್ರನನ್ನು ಪೂಜಿಸಿದರು. ಅಷ್ಟರಲ್ಲಿ ರಣರಂಗಕ್ಕೆ ಬಂದ ವಿಭೀಷಣನು ಜರ್ಜರಿತವಾಗಿ ಬಿದ್ದಿದ್ದ ಅಣ್ಣನ ದೇಹದ ಮೇಲೆ ಬಿದ್ದು ಗೋಳಾಡಿದನು. ಆಗ ಶ್ರೀರಾಮನು ಅವನನ್ನು ಸಮಾಧಾನಗೊಳಿಸಿ ಮುಂ ದಿನ ಸಂಸ್ಕಾರಮಾಡಲು ತಿಳಿಸಿದನು. ಲಂಕೇಶನು ಮಡಿದನೆಂದು ಕೇಳಿದಾಗ ಲಂಕೆಯಿಂದ ಅವನ ರಾಣಿಯರೆಲ್ಲ ಬಂದು ಅತಿಯಾಗಿ ದುಃಖಿಸಿದರು. ರಾವ ಣನ ಪಟ್ಟದರಾಣಿಯಾದ ಮಂಡೋದರಿಯು ಬಂದು ರಾವಣನ ಕಳೇಬರದ ಮೇಲೆ ಬಿದ್ದು ಶೋಕಿಸಿದಳು. ತನ್ನ ಮಾತನ್ನೂ ಕೇಳದೆ ರಾವಣನಿಗಿಂತಹ ಗತಿಯಾಯಿತಲ್ಲಾ ಎಂದು ಹಲುಬಿದಳು. ಹಾಗೆ ದುಃಖಿಸುತ್ತಾ ಮೂರ್ಛೆ ಹೋದಳು. ಉಳಿದವರು ಅವಳಿಗೆ ಉಪಚಾರ ಮಾಡಿದರು. ಅಷ್ಟರಲ್ಲಿ ವಿಭೀಷಣನು ರಾಮನ ಸೂಚನೆಯಂತೆ ರಾಣಿಯರನ್ನು ಸಮಾಧಾನಪಡಿಸಿ ದನು. ಗಂಧದ ಮರಗಳ ಚಿತೆಯ ಮೇಲೆ ರಾವಣನ ಅಂತ್ಯಸಂಸ್ಕಾರವು

ಶಾಸ್ತ್ರೋಕ್ತವಾಗಿ ಜರಗಿತು. ದಹನ ಸಂಸ್ಕಾರವಾದ ಮೇಲೆ ವಿಭೀಷಣನು ರಾವಣಾದಿಗಳಿಗೆ ತಿಲೋದಕವಿತ್ತನು.

ಶತ್ರುಸಂಹಾರ ಕಾರ್ಯವಾದ ಮೇಲೆ ಶ್ರೀರಾಮನು ವಿಭೀಷಣನಿಗೆ ಲಂಕಾರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿಸಿದನು. ಅನಂತರ ಶ್ರೀರಾಮನು ಸೀತಾದೇವಿಗೆ ರಾವಣವಧೆಯ ವೃತ್ತಾಂತವನ್ನು ತಿಳಿಸಿ ಆಕೆಯ ಸಂದೇಶವನ್ನು ತರಲು ಮಾರುತಿಯನ್ನು ಕಳುಹಿಸಿದನು. ಅವನು ಅಲ್ಲಿಗೆ ಹೋಗಿ ಸೀತಾದೇವಿಯು ಶ್ರೀರಾಮನನ್ನು ಕಾಣಲು ಕಾತರಳಾಗಿದ್ದಾಳೆಂಬ ಸಂದೇಶವನ್ನು ತಂದನು. ಆ ಮೇಲೆ ವಿಭೀಷಣನು ಅಶೋಕವನಕ್ಕೆ ಹೋಗಿ, ಸೀತಾದೇವಿಯು ಮಂಗಲಸ್ನಾನಮಾಡಿ ಪಾಲಕಿಯನ್ನೇರಿ ಬರಬೇಕೆಂಬ ರಾಮನ ಆಜ್ಞೆಯನ್ನು ತಿಳಿಸಿದನು. ಅದರಂತೆ ಆಕೆಯು ರಾಮನಿರುವಲ್ಲಿಗೆ ಪಾಲಕಿಯನ್ನೇರಿ ಬಂದು ನಿಂತುಕೊಂಡಳು. ಪತ್ನಿಯನ್ನು ಕಾಣುತ್ತಲೆ ರಾಮನ ಮನಸ್ಸಿನಲ್ಲಿ ಬಗೆಬಗೆಯ ಆಲೋಚನೆಗಳೆದ್ದುವು. ಅವನು ಗಂಭೀರನಾಗಿ, ತನ್ನ ಚರಿತ್ರೆಯನ್ನು ಕಾಪಾಡಿಕೊಳ್ಳುವುದಕ್ಕಾಗಿ ಯುದ್ಧಮಾಡಿ ವಿಜಯಿಯಾದೆನೆಂದನು. ಅವಳ ಚರಿತ್ರದಲ್ಲಿ ಅವನಿಗೆ ಸಂದೇಹವಿರುವುದಾಗಿಯೂ ತಿಳಿಸಿದನು. ರಾಮನ ಮಾತು ಕೇಳಿದೊಡನೆ ಸೀತಾದೇವಿಯು ತನ್ನ ಪರಿಶುದ್ಧತೆಯನ್ನು ತೋರಲು ನಿಶ್ಚಯಿಸಿದಳು. ಲಕ್ಷ್ಮಣನಿಗೆ ಅಗ್ನಿಕುಂಡ ನಿರ್ಮಿಸಲು ಹೇಳಿದಳು. ಶ್ರೀರಾಮನನ್ನು ಧ್ಯಾನಿಸುತ್ತ ಆಕೆಯು ಧಗಧಗಿಸುವ ಅಗ್ನಿಯಲ್ಲಿ ಇಳಿದಳು. ಅಲ್ಲಿದ್ದ ದೇವತೆಗಳು ಶ್ರೀರಾಮನು ಸಾಮಾನ್ಯರಂತೆ ವರ್ತಿಸಬಾರದಿತ್ತೆಂದು ಅವನೊಡನೆ ಹೇಳಿದರು. ಆಗ ರಾಮನು ಮೌನವಾಗಿರುವುದನ್ನು ಕಂಡು ಬ್ರಹ್ಮದೇವನು ಶ್ರೀರಾಮನು ಸಾಕ್ಷಾತ್ ಶ್ರೀಮನ್ನಾರಾಯಣನೇ ಎಂದು ಅವರೆಲ್ಲರಿಗೂ ತಿಳಿಸಿದನು. ಅಷ್ಟರಲ್ಲಿ ಯಜ್ಞೇಶ್ವರನೇ ಪ್ರತ್ಯಕ್ಷನಾಗಿ ಅಗ್ನಿಕುಂಡದಿಂದ ಸೀತೆಯನ್ನೆತ್ತಿಕೊಂಡು ಬಂದನು. ಸೀತೆಯು ಪರಿಶುದ್ಧೆಯೆಂದು ತಿಳಿಸಿದನು. ಶ್ರೀರಾಮನು ಆಕೆಯನ್ನು ಸ್ವೀಕರಿಸಿದನು. ಅಷ್ಟರಲ್ಲಿ ದೇವಲೋಕದಿಂದ ಬಂದ ದಶರಥನೂ ಆಕೆ ಪುಣ್ಯಚರಿತೆಯೆಂದು ಹೇಳಿ ಮಕ್ಕಳನ್ನೂ ಸೊಸೆಯನ್ನೂ ಹರಸಿದನು.

ಸೀತಾದೇವಿಯು ಅಗ್ನಿಪ್ರವೇಶದಿಂದ ತಾನು ಪವಿತ್ರಳೆಂಬುದನ್ನು ತೋರಿ

ಸಿದ ಮೇಲೆ ಶ್ರೀರಾಮನು ಲಕ್ಷ್ಮಣ ನಿರ್ಮಿತವಾದ ವಾಸಸ್ಥಾನದಲ್ಲಿ ಸುಖ ನಿದ್ರೆ ಮಾಡಿದನು.

ಮರುದಿನವೇ ಶ್ರೀರಾಮನು ವಿಭೀಷಣನೊಡನೆ ಹೇಳಿ ಅಯೋಧ್ಯೆಗೆ ಹೊರಟನು. ಆಗ ವಿಭೀಷಣನು ಅವರಿಗೆ ಪುಷ್ಪಕವಿಮಾನವನ್ನು ಕೊಟ್ಟನು. ಶ್ರೀರಾಮನು ವಿಭೀಷಣನಿಂದ ವಾನರವೀರರಿಗೆ ಉಡುಗೊರೆಗಳನ್ನು ಕೊಡಿಸಿದನು. ಅವರೆಲ್ಲರನ್ನೂ ಬೀಳ್ಕೊಂಡು ಸೀತಾಲಕ್ಷ್ಮಣರೊಂದಿಗೆ ವಿಮಾನವೇರಿದನು. ಆಗ ವಿಭೀಷಣ ಸುಗ್ರೀವರೂ ರಾಮನೊಂದಿಗೆ ಬರುವೆವೆಂದರು. ಶ್ರೀರಾಮನು ಅವರೆಲ್ಲರನ್ನೂ ಕೂಡಿಕೊಂಡು ಅಯೋಧ್ಯೆಗೆ ಹೊರಟನು.

ವಿಮಾನವು ಮುಂದೆ ಹೋಗುತ್ತಿರುವಾಗ ಶ್ರೀರಾಮನು ಸೀತಾದೇವಿಗೆ, ಲಂಕಾನಗರಿಯನ್ನೂ ಅವನು ಕಟ್ಟಿದ ಸೇತುವೆಯನ್ನೂ ತೋರಿಸಿದನು. ಅಷ್ಟರಲ್ಲಿ ಕಿಷ್ಕಿಂಧೆಯು ಬಂತು. ಆಗ ಸೀತೆಯು ಕಪಿವೀರರ ಪತ್ನಿಯರನ್ನು ನೋಡಬೇಕೆಂದು ಬಯಸಿದಳು. ಅದರಂತೆ ಅವರೆಲ್ಲರೂ ವಿಮಾನದಿಂದಿಳಿದು ತಮ್ಮ ತಮ್ಮ ಪತ್ನಿಯರೊಂದಿಗೆ ನಿಂತುಕೊಂಡರು. ಅವರನ್ನು ಕಂಡು ಎಲ್ಲರಿಗೂ ಆನಂದವಾಯಿತು. ಅನಂತರ ವಿಮಾನವು ಮುಂದಕ್ಕೆ ಹೋಗುವಾಗ ಶ್ರೀರಾಮನು ಪಂಪಾ ಸರೋವರವನ್ನೂ, ರಾವಣನಿಗೂ ಜಟಾಯುವಿಗೂ ಯುದ್ಧವಾದ ಸ್ಥಳವನ್ನೂ, ಸುಂದರವಾದ ಗೋದಾವರೀ ತೀರವನ್ನೂ ತೋರಿಸಿದನು. ಆಗಲೇ ಅವರಿಗೆ ಭರದ್ವಾಜಾಶ್ರಮವು ಕಾಣಿಸಿತು. ಅಲ್ಲಿಯೇ ಗಂಗಾನದಿಯೂ ಕಂಡಿತು. ಮುಂದೆ ಅವರಿಗೆ ಸರಯೂ ನದಿಯು ಕಾಣಲು "ಇಗೋ ನಮ್ಮ ಅಯೋಧ್ಯೆ" ಎಂದು ರಾಮನು ಉತ್ಸಾಹದಿಂದ ಹೇಳಿದನು. ಅವರೆಲ್ಲರೂ ಅಯೋಧ್ಯೆಯನ್ನು ವಂದಿಸಿದರು.

ಅನಂತರ ಹದಿನಾಲ್ಕು ವರ್ಷಗಳ ವನವಾಸವನ್ನು ಮುಗಿಸಿ ಬಂದ ಸೀತಾರಾಮಲಕ್ಷ್ಮಣರು ಭರದ್ವಾಜಾಶ್ರಮದಲ್ಲಿ ಇಳಿದರು. ಭರದ್ವಾಜ ಮಹರ್ಷಿಯ ಸೂಚನೆಯಂತೆ ಅವರು ಆ ದಿನ ಅಲ್ಲಿದ್ದರು. ಆಗ ಶ್ರೀರಾಮನು ಹನುಮಂತನನ್ನು ಕರೆದು, ಅವರ ಬರುವಿಕೆಯನ್ನು ಗುಹನಿಗೂ ಭರತನಿಗೂ ತಿಳಿಸಬೇಕೆಂದು ಹೇಳಿ ಕಳುಹಿಸಿದನು. ಮಾರುತಿಯು ಗುಹನಿಗೆ ಸೀತಾರಾಮರ ಬರವನ್ನು ತಿಳಿಸಿ ನಂದಿಗ್ರಾಮವನ್ನು ಸೇರಿ ಭರತನಿಗೂ ತಿಳಿಸಿದನು.

ಅದನ್ನು ಕೇಳಿ ಭರತನಿಗೆ ಅತಿಯಾದ ಆನಂದವಾಯಿತು. ಅವನು ಹಲವು ಸಲ ಮಾರುತಿಯಿಂದ ರಾಮಾದಿಗಳ ವಿಚಾರ ತಿಳಿದುಕೊಂಡನು. ಅಷ್ಟರಲ್ಲಿ ಈ ವಾರ್ತೆ ಅಯೋಧ್ಯಾನಗರಕ್ಕೂ ಮುಟ್ಟಿತು. ನಗರದ ಸಮಸ್ತರೂ ಭರತನೊಂದಿಗೆ ರಾಮನ ಬರವನ್ನೇ ಇದಿರು ನೋಡುತ್ತ ನಿಂತರು.

ಅಷ್ಟರಲ್ಲಿ ಆಕಾಶದಲ್ಲಿ ಹಾರಿಬರುತ್ತಿರುವ ಪುಷ್ಪಕವಿಮಾನವು ಗೋಚರಿಸಿತು. ಭರತನಾಗ ಕೈಯೆತ್ತಿ ನಮಸ್ಕರಿಸಿದನು. ಪುರಜನರೂ ನಮಸ್ಕರಿಸಿದರು. ಅಷ್ಟರಲ್ಲಿ ವಿಮಾನವು ಅಲ್ಲಿಗೆ ಬಂದಿಳಿಯಿತು. ಭರತನು ಓಡಿಹೋಗಿ ಅಣ್ಣನ ಕಾಲುಗಳನ್ನು ಹಿಡಿದುಕೊಂಡನು. ಅತ್ತಿಗೆಗೆ ನಮಸ್ಕರಿಸಿದನು. ಲಕ್ಷ್ಮಣನನ್ನು ತಬ್ಬಿಕೊಂಡನು. ವಾನರರನ್ನೆಲ್ಲ ಅಭಿನಂದಿಸಿದನು. ಸುಗ್ರೀವನನ್ನು ಬಂಧುವೆಂದು ಆಲಿಂಗಿಸಿದನು. ಅನಂತರ ಅವರೆಲ್ಲರೂ ಅಯೋಧ್ಯೆಗೆ ಮಹಾ ವೈಭವದಿಂದ ಹೊರಟರು. ಶ್ರೀರಾಮನು ಸೀತೆಯೊಂದಿಗೆ ಅವರಿಗಾಗಿ ಬಂದಿದ್ದ ರಥವನ್ನೇರಿ ಕುಳಿತನು. ಭರತನೇ ಸಾರಥಿಯಾಗಿ ರಥ ನಡೆಸಿದನು. ಲಕ್ಷ್ಮಣನು ಚಾಮರ ಬೀಸತೊಡಗಿದನು. ಪುರಜನರೆಲ್ಲರೂ ಜಯಕಾರ ಮಾಡಿದರು. ಹೀಗೆ ಮಹಾ ವೈಭವದಿಂದ ಶ್ರೀರಾಮನು ಅಯೋಧ್ಯೆಯನ್ನು ಪ್ರವೇಶಿಸಿದನು.

ಮರುದಿನ ಶ್ರೀರಾಮ ಪಟ್ಟಾಭಿಷೇಕವು ವೇದೋಕ್ತವಾಗಿ ಜರಗಿತು. ಪುರೋಹಿತರು ಮಂತ್ರಘೋಷ ಮಾಡುತ್ತಿರುವಾಗ ಮಂಗಲಸ್ನಾನಮಾಡಿ ಅಲಂಕಾರಗೊಂಡ ಶ್ರೀರಾಮನನ್ನು ಸೀತೆಯೊಂದಿಗೆ ಸಿಂಹಾಸನವೇರಿಸಿ ವಾಮದೇವ, ಜಾಬಾಲಿ, ವಸಿಷ್ಠ ಮೊದಲಾದ ಋಷಿಗಳು ಅಭಿಷೇಕಮಾಡಿದರು. ವಸಿಷ್ಠರು ಶ್ರೀರಾಮನ ತಲೆಯ ಮೇಲೆ ಸೂರ್ಯವಂಶದ ಅರಸರ ಕಿರೀಟವನ್ನು ಇರಿಸಿದರು. ಶತ್ರುಘ್ನನು ಶ್ವೇತಛತ್ರ ಹಿಡಿದು ನಿಂತಿದ್ದನು. ಸುಗ್ರೀವನೂ ವಿಭೀಷಣನೂ ಚಾಮರ ಬೀಸಿದರು. ಸುವಾಸಿನಿಯರು ಬಂದು ಶ್ರೀರಾಮನಿಗೆ ಮಂಗಲಾರತಿ ಬೆಳಗಿದರು. ಸಮಾರಂಭಕ್ಕೆ ಬಂದ ರಾಜರೂ ದೇವತೆಗಳೂ ರಾಮನಿಗೆ ಉಡುಗೊರೆಯಿತ್ತರು. ಎಲ್ಲರೂ ಜಯಘೋಷ ಮಾಡಿದರು.

ಶ್ರೀರಾಮನು ಪಟ್ಟಾಭಿಷೇಕಕ್ಕೆ ಬಂದವರಿಗೆಲ್ಲ ಗೋದಾನವನ್ನೂ ಧನ

ಕನಕಾದಿ ದಾನಗಳನ್ನೂ ಮಾಡಿದನು. ಸಹೋದರರಿಗೂ ಬಂಧುಗಳಿ
ವಸ್ತ್ರಾಭರಣಗಳ ಉಡುಗೊರೆಯಿತ್ತನು. ಸೀತಾದೇವಿಗೆ ಮುತ್ತಿನ ಹಾರವನ
ವಸ್ತ್ರಾಭರಣಗಳನ್ನೂ ಉಡುಗೊರೆ ಕೊಟ್ಟನು. ಆಕೆ ಅದನ್ನು ಸ್ವೀಕರಿಸಿ
ಯಲ್ಲೇ ಇದ್ದ ಆಂಜನೇಯನಿಗೆ ಕೊಟ್ಟಳು. ಅವನು ಭಕ್ತಿಯಿಂದ ಅದ
ಸ್ವೀಕರಿಸಿದನು. ಅನಂತರ ಸುಗ್ರೀವ ವಿಭೀಷಣ ಮುಂತಾದವರೆಲ್ಲರೂ ರಾಮ
ಅಪ್ಪಣೆ ಪಡೆದು ತಮ್ಮ ತಮ್ಮ ರಾಜ್ಯಗಳಿಗೆ ಮರಳಿದರು.

ಶ್ರೀರಾಮನು ಭರತನನ್ನು ಯುವರಾಜನನ್ನಾಗಿ ಮಾಡಿಕೊಂಡು
ಯಂದಿರಿಗೆ ಸಂತೋಷವಾಗುವಂತೆ, ಸಹೋದರರಿಗೆ ಪ್ರಿಯವಾಗುವಂತೆ, ಪ್ರ
ಕೋಟಿಗೆ ಸುಖಶಾಂತಿ ದೊರೆವಂತೆ ಬಹಳ ಕಾಲದ ವರೆಗೆ ಧರ್ಮದಿ
ರಾಜ್ಯವಾಳಿದನು.

ಶ್ರೀರಾಮಚಂದ್ರನ ಈ ಚರಿತ್ರೆಯನ್ನು ವಾಲ್ಮೀಕಿ ಮಹರ್ಷಿಗಳು ಕಾ
ವಾಗಿ ಬರೆದು ಆದಿಕವಿಯಾದರು. ಆ ಕಾವ್ಯವು ಮಹಾಕಾವ್ಯವಾಗಿ ಲೋ
ಮಾನ್ಯತೆಯನ್ನು ಪಡೆಯಿತು.

---

ಸಂಪೂರ್ಣ